KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೩ | ಬೆಂಗಳೂರು, ಗುರುವಾರ, ನವೆಂಬರ್ ೬, ೨೦೦೮ (ಕಾರ್ತೀಕ ೧೫, ಶಕ ವರ್ಷ ೧೯೩೦) | ಸಂಚಿಕೆ ೪೪ |
|---|---|---|

## ಭಾಗ – ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**ಕರ್ನಾಟಕ ಲೋಕಸೇವಾ ಆಯೋಗ, ಉದ್ಯೋಗ ಸೌಧ, ಬೆಂಗಳೂರು–1.**

**ಅಧಿಸೂಚನೆ**

**ಸಂಖ್ಯೆ: ಇ.ಪ(1)1219/2008–09/ಪಿಎಸ್‌ಸಿ, ದಿನಾಂಕ: 30ನೇ ಅಕ್ಟೋಬರ್ 2008.**

**ವಿಷಯ:** 2008ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಗಳಿಗೆ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸುವ ಬಗ್ಗೆ.

ಆಯೋಗದಿಂದ ನಡೆಸಲಾಗುವ **2008ನೇ** ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಗಳಿಗೆ ಕರ್ನಾಟಕ ನಾಗರಿಕ ಸೇವಾ ನಿಯಮಗಳಡಿಯಲ್ಲಿ ಸೇವೆ ಸಲ್ಲಿಸುತ್ತಿರುವ ಅರ್ಹ ಅಭ್ಯರ್ಥಿಗಳಿಂದ ನಿಗದಿತ ನಮೂನೆ–'ಎ' ಅಥವಾ 'ಬಿ' ಗಳಲ್ಲಿ ಅರ್ಜಿಗಳನ್ನು ಆಹ್ವಾನಿಸಿದೆ. ಅರ್ಜಿ ಸ್ವೀಕರಿಸಲು ನಿಗದಿಪಡಿಸಲಾದ ಕೊನೆಯ ದಿನಾಂಕ: **06–12–2008.** ಈ ಪರೀಕ್ಷೆಗಳನ್ನು **2009ನೇ ಫೆಬ್ರವರಿ** ಮಾಹೆಯಲ್ಲಿ ನಡೆಸಲಾಗುವುದು. ಪರೀಕ್ಷೆಗಳ ವಿವರವಾದ ವೇಳಾ ಪಟ್ಟಿಯನ್ನು ಈ ಅಧಿಸೂಚನೆಯ ಅನುಬಂಧ "ಎ" ಮತ್ತು "ಬಿ" ಗಳಲ್ಲಿ ನೀಡಿದೆ. ಪರೀಕ್ಷೆಗೆ ಹಾಜರಾಗಬಯಸುವ ಅಭ್ಯರ್ಥಿಗಳು ಒಂದು ಅರ್ಜಿಯಲ್ಲಿ ಅನುಬಂಧ–'ಎ' ನಲ್ಲಿ ಗರಿಷ್ಠ 4 ಮತ್ತು ಅನುಬಂಧ–'ಬಿ' ನಲ್ಲಿ ನಾಲ್ಕು ವಿಷಯಗಳನ್ನು ಆಯ್ಕೆ ಮಾಡಿಕೊಳ್ಳಬಹುದು. ಅಭ್ಯರ್ಥಿಗಳು ವಿಷಯ ಸಂಕೇತಗಳನ್ನು ಎಚ್ಚರಿಕೆಯಿಂದ ಭರ್ತಿ ಮಾಡಲು ಸೂಚಿಸಿದೆ. ಅಭ್ಯರ್ಥಿಗಳು ಪಾಸ್ ಪೋರ್ಟ್ ಅಳತೆಯ (2 x 1, ¾) ಇತ್ತೀಚಿನ ಭಾವಚಿತ್ರವನ್ನು ಅರ್ಜಿಯ ನಿಗದಿತ ಸ್ಥಳದಲ್ಲಿ ಅಂಟಿಸಿ, ಭಾವಚಿತ್ರದ ಕೆಳಗೆ ನಿಗದಿಪಡಿಸಿರುವ ಬಾಕ್ಸ್‌ನಲ್ಲಿ ಸಹಿಮಾಡಿ ಅದನ್ನು ಕಛೇರಿಯ ಮುಖ್ಯಸ್ಥರಿಂದ ದೃಢೀಕರಿಸತಕ್ಕದ್ದು.

1) ನಮೂನೆ 'ಎ' ಯನ್ನು ಎಸ್.ಎ.ಎಸ್, ಖಜಾನೆ ಅಕೌಂಟ್ಸ್ ಮತ್ತು ಎಲೆಕ್ಟ್ರಿಸಿಟಿ ಪರೀಕ್ಷೆ ಗಳನ್ನು ಹೊರತುಪಡಿಸಿ ಉಳಿದ ಎಲ್ಲಾ ವಿಷಯಗಳಿಗೆ ನಿಗದಿ ಪಡಿಸಿದೆ;
2) ನಮೂನೆ 'ಬಿ' ಯನ್ನು ಎಸ್.ಎ.ಎಸ್, ಖಜಾನೆ ಅಕೌಂಟ್ಸ್ ಮತ್ತು ಎಲೆಕ್ಟ್ರಿಸಿಟಿ ವಿಷಯಗಳ ಪರೀಕ್ಷೆಗಳಿಗೆ ಮಾತ್ರ ನಿಗದಿಪಡಿಸಿದೆ;
3) ಅಭ್ಯರ್ಥಿಗಳು ಆಯೋಗವು ನಿಗದಿಪಡಿಸಿರುವ ಒಂದೇ ಹಾಳೆಯನ್ನೊಳಗೊಂಡಂತಹ ಅರ್ಜಿ ನಮೂನೆಯನ್ನು ಮಾತ್ರ ಉಪಯೋಗಿಸತಕ್ಕದ್ದು. ಅದನ್ನು ಹೊರತುಪಡಿಸಿ ಬೇರೆ ಯಾವುದೇ ನಮೂನೆಗಳಲ್ಲಿ ಅಂದರೆ ಬೆರಳಚ್ಚು ಅಥವಾ ನೆರಳಚ್ಚು ಮಾಡಿದ, ಕೈ ಬರಹದ ಹಾಗೂ ಹಳೆಯ ನಮೂನೆಯ ಅರ್ಜಿಗಳನ್ನು ಸಲ್ಲಿಸಿದಲ್ಲಿ ಅಂತಹ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
4) ಈ ಹಿಂದೆ ವಿಭಾಗೀಯ ಮಟ್ಟದಲ್ಲಿ ನಡೆಸಲಾಗುತ್ತಿದ್ದ ಇಲಾಖಾ ಪರೀಕ್ಷೆಗಳನ್ನು ಬೆಂಗಳೂರು ಕೇಂದ್ರದಲ್ಲಿ ಮಾತ್ರ ನಡೆಸಲಾಗುವುದು.

2. **ಆಯೋಗವು ಇಲಾಖಾ ಪರೀಕ್ಷೆಗಳಲ್ಲಿ ಕೆಳಕಂಡ ವಿಷಯಗಳಿಗೆ ವಸ್ತುನಿಷ್ಠ ಬಹುಆಯ್ಕೆ ಮಾದರಿಯ (OBJECTIVE TYPE MULTIPLE CHOICE) ಪ್ರಶ್ನೆಪತ್ರಿಕೆಗಳನ್ನು ನೀಡಲಾಗುವುದು.**

1. ಅಕೌಂಟ್ಸ್ ಲೋಯರ್
2. ಕಮ್ಯುನಿಟಿ ಡೆವಲಪ್‌ಮೆಂಟ್ ಭಾಗ–1
3. ಕಮ್ಯುನಿಟಿ ಡೆವಲಪ್‌ಮೆಂಟ್ ಭಾಗ–2
4. ಎಂಪ್ಲಾಯ್‌ಮೆಂಟ್ ಎಕ್ಸ್‌ಚೇಂಜ್ ಪ್ರೊಸೀಜರ್ ಹೈಯರ್
5. ಎಂಪ್ಲಾಯ್‌ಮೆಂಟ್ ಎಕ್ಸ್‌ಚೇಂಜ್ ಪ್ರೊಸೀಜರ್ ಲೋಯರ್
6. ಫಾರೆಸ್ಟ್ ಪತ್ರಿಕೆ–1
7. ಫಾರೆಸ್ಟ್ ಪತ್ರಿಕೆ–2
8. ಜನರಲ್ ಲಾ ಭಾಗ–2
9. ಹೋಮ್ ಗಾರ್ಡ್ಸ್ ಮ್ಯಾನ್ಯುಯಲ್
10. ಆಕ್ಟ್ ಅಂಡ್ ರೂಲ್ಸ್ ರಿಲೇಟಿಂಗ್ ಟು ವಿಮೆನ್ ಆಂಡ್ ಚೈಲ್ಡ್ ಡೆವೆಲಪ್‌ಮೆಂಟ್
11. ಮೋಟಾರ್ ವೆಹಿಕಲ್ಸ್
12. ಮೈನಿಂಗ್ ಭಾಗ–1
13. ಮೈನಿಂಗ್ ಭಾಗ–2
14. ಪ್ರಿಸನ್ಸ್
15. ಪೋರ್ಟ್ಸ್ ಹೈಯರ್
16. ಪೋರ್ಟ್ಸ್ ಲೋಯರ್
17. ಸೋಷಿಯಲ್ ವೆಲ್‌ಫೇರ್ ಆಂಡ್ ಬ್ಯಾಕ್‌ವರ್ಡ್ ಕ್ಲಾಸಸ್ ಮ್ಯಾನುಯಲ್ ಭಾಗ–1
18. ಸೋಷಿಯಲ್ ವೆಲ್‌ಫೇರ್ ಆಂಡ್ ಬ್ಯಾಕ್‌ವರ್ಡ್ ಕ್ಲಾಸಸ್ ಮ್ಯಾನುಯಲ್ ಭಾಗ–2
19. ಯೂಥ್ ಸರ್ವೀಸ್ ಮ್ಯಾನ್ಯುಯಲ್
20. ಎಕ್ಸೈಸ್
21. ಪೊಲೀಸ್ ಮ್ಯಾನ್ಯುಯಲ್
22. ಅಕೌಂಟ್ಸ್ ಹೈಯರ್
23. ಕಮರ್ಷಿಯಲ್ ಟ್ಯಾಕ್ಸ್ ಭಾಗ–2 (ಲೋಯರ್)
24. ಫಾರೆಸ್ಟ್
25. ಫ್ಯಾಕ್ಟರೀಸ್ ಆಂಡ್ ಬಾಯ್ಲರ್ಸ್ ಲಾಸ್
26. ಲೇಬರ್
27. ಲೋಕಲ್ ಲಾಸ್ ಆಂಡ್ ಕಮರ್ಷಿಯಲ್ ಬುಕ್ ಕೀಪಿಂಗ್
28. ಪ್ರೆಸ್ ಆಂಡ್ ಅಲೈಡ್ ಆಫೀಸಸ್ ಮ್ಯಾನ್ಯುಯಲ್ ಹೈಯರ್, ಪತ್ರಿಕೆ–1
29. ಪ್ರೆಸ್ ಆಂಡ್ ಅಲೈಡ್ ಆಫೀಸಸ್ ಮ್ಯಾನ್ಯುಯಲ್ ಲೋಯರ್
30. ಪಿ.ಡಬ್ಲ್ಯೂ.ಡಿ ಹೈಯರ್ ಭಾಗ–1, ಪತ್ರಿಕೆ–2
31. ಪಿ.ಡಬ್ಲ್ಯೂ.ಡಿ ಹೈಯರ್ ಭಾಗ–2
32. ಪಿ.ಡಬ್ಲ್ಯೂ.ಡಿ ಲೋಯರ್
33. ರಿಜಿಸ್ಟ್ರೇಷನ್
34. ಸಿರಿಕಲ್ಚರ್
35. ಕೋ–ಆಪರೇಷನ್
36. ಜನರಲ್ ಲಾ ಭಾಗ–1
37. ಮುನಿಸಿಪಲ್ ಆಂಡ್ ಲೋಕಲ್ ಬೋರ್ಡ್ಸ್
38. ಮಾರ್ಕೆಟಿಂಗ್
39. ರೆವಿನ್ಯೂ ಹೈಯರ್ ಭಾಗ–1
40. ರೆವಿನ್ಯೂ ಹೈಯರ್ ಭಾಗ–2
41. ರೆವಿನ್ಯೂ ಲೋಯರ್
42. ಕಮರ್ಷಿಯಲ್ ಟ್ಯಾಕ್ಸಸ್ ಭಾಗ–1 ಹೈಯರ್

43. ಕೋ–ಆಪರೇಟಿವ್ ಆಡಿಟ್
44. ಇನ್ಸೂರೆನ್ಸ್ ಅಡ್ವಾನ್ಸಡ್
45. ಇನ್ಸೂರೆನ್ಸ್ ಹೈಯರ್, ಪತ್ರಿಕೆ–1 ಮತ್ತು 3
46. ಇನ್ಸೂರೆನ್ಸ್ ಲೋಯರ್, ಪತ್ರಿಕೆ–1 ಮತ್ತು 3
47. ಫುಡ್ ಆಂಡ್ ಸಿವಿಲ್ ಸಪ್ಲೈಸ್ ಎಕ್ಸಾಮಿನೇಷನ್
48. ಕರ್ನಾಟಕ ಕನ್ಸ್ಯೂಮರ್ ಪ್ರೋಟಕ್ಷನ್ಸ್ ಸ್ಟೇಟ್ ಕಮಿಷನ್ ಅಂಡ್ ಡಿಸ್ಟ್ರಿಕ್ ಫೋರಮ್ ಸರ್ವಿಸ್ ಎಕ್ಸಾಮಿನೇಶನ್
49. ಇಂಡಿಯನ್ ಕಾಂಟ್ರಕ್ಟ್ ಆಕ್ಟ್
50. ಕೆ.ಪಿ.ಎಸ್.ಸಿ. ಮ್ಯಾನ್ಯುಯಲ್
51. ಕೆ.ಪಿ.ಎಸ್.ಸಿ. ರೆಕ್ರೂಟ್‌ಮೆಂಟ್ ರೂಲ್ಸ್
52. ಸೆಕ್ರೆಟೆರಿಯಟ್ ಮ್ಯಾನ್ಯುಯಲ್ ಭಾಗ–1
53. ಸ್ಪೆಷಲ್ ಲಾಸ್ ಆಂಡ್ ಸರ್ವೀಸ್ ರೂಲ್ಸ್
54. ಎಸ್.ಎ.ಎಸ್ ಭಾಗ–1, ಪತ್ರಿಕೆ–2 ಮತ್ತು 3
55. ಎಸ್.ಎ.ಎಸ್ ಭಾಗ–2,
56. ಎಸ್.ಎ.ಎಸ್ ಭಾಗ–3
57. ಟ್ರೆಜರಿ ಅಕೌಂಟ್ಸ್ ಭಾಗ–1, ಪತ್ರಿಕೆ–2 ಮತ್ತು 3
58. ಟ್ರೆಜರಿ ಅಕೌಂಟ್ಸ್ ಭಾಗ–2
59. ಎಲೆಕ್ಟ್ರಿಸಿಟಿ ಲಾಸ್
60. ಎಲೆಕ್ಟ್ರಿಸಿಟಿ (ಆಡಿಟ್ ಆಂಡ್ ಅಕೌಂಟ್ಸ್)ಲಾಸ್ (ಹೈಯರ್)ಎಕ್ಸಾಮಿನೇಷನ್ ಭಾಗ–1
61. ಎಲೆಕ್ಟ್ರಿಸಿಟಿ (ಆಡಿಟ್ ಆಂಡ್ ಅಕೌಂಟ್ಸ್) ಲಾಸ್ (ಲೋಯರ್)ಎಕ್ಸಾಮಿನೇಷನ್
62. ಕರ್ನಾಟಕ ಅಡ್ಮಿನಿಸ್ಟ್ರೇಟಿವ್ ಟ್ರಿಬ್ಯೂನಲ್ ಎಕ್ಸಾಮಿನೇಷನ್.

ಪ್ರತಿ ವಿಷಯಗಳಲ್ಲಿನ ಪಠ್ಯಕ್ರಮದಲ್ಲಿರುವ **(Syllabus)** ಯಾವುದಾದರೂ ನಿಯಮಗಳು/ ಅಧಿನಿಯಮಗಳು ನಿರಸನಗೊಂಡಿದ್ದಲ್ಲಿ **(Repealed)** ಅವುಗಳನ್ನು ಕೈಬಿಟ್ಟು ಹೊಸದಾಗಿ ಸೇರ್ಪಡೆಯಾಗಿರುವ ಹಾಗೂ ಪ್ರಸಕ್ತ ಇಲಾಖೆಗಳಲ್ಲಿ ಚಾಲ್ತಿಯಲ್ಲಿರುವ ನಿಯಮ/ ಅಧಿನಿಯಮ– ಗಳನ್ವಯ ಪ್ರಶ್ನೆಪತ್ರಿಕೆಗಳನ್ನು ಸಿದ್ದಪಡಿಸಿ ಪರೀಕ್ಷೆಗಳನ್ನು ನಡೆಸಲಾಗುವುದೆಂದು ಅಭ್ಯರ್ಥಿಗಳ ಗಮನಕ್ಕೆ ತರಲಾಗಿದೆ.

ಈ ವಿಷಯಗಳಲ್ಲಿನ ಪಶ್ನೆಪತ್ರಿಕೆಗಳಲ್ಲಿ ಪ್ರತಿ ಪ್ರಶ್ನೆಗೂ ನಾಲ್ಕು ಸಂಭವನೀಯ ಉತ್ತರಗಳಿರುತ್ತವೆ. ಪ್ರತಿ ಪ್ರಶ್ನೆಗೆ ನೀಡಲಾದ ನಾಲ್ಕು ಉತ್ತರಗಳ ಪೈಕಿ ಒಂದು ಸರಿ ಉತ್ತರವನ್ನು ಆಯ್ಕೆ ಮಾಡಿ ಉತ್ತರಿಸಬೇಕಿರುತ್ತದೆ. ಪ್ರತಿ ಪ್ರಶ್ನೆಗೂ ಆಯ್ಕೆ ಮಾಡಲಾದ ಉತ್ತರವು ಎಲ್ಲಾ ರೀತಿಯಿಂದಲೂ ಸಮರ್ಪಕವಾಗಿರುತ್ತದೆಯೆಂದು ಅರಿತು, ತೃಪ್ತಿಹೊಂದಿದ ನಂತರವೇ ಅಭ್ಯರ್ಥಿಗಳು ನೀಲಿ ಅಥವಾ ಕಪ್ಪು ಬಣ್ಣದ ಬಾಲ್‌ಪೆನ್ನಿನಿಂದ ಎನ್‌ಕೋಡ್ (ಸಂಕೇತ ಗುರುತು) ಮಾಡಬೇಕು, ತರುವಾಯ ತಪ್ಪು ಉತ್ತರಗಳನ್ನು ಯಾವುದೇ ಸಂದರ್ಭದಲ್ಲಿ ಅಳಿಸಲು ಸಾಧ್ಯವಿರುವುದಿಲ್ಲ.

**ಮೇಲ್ಕಂಡ ವಿಷಯಗಳ ಪರೀಕ್ಷೆಯಲ್ಲಿ ನಿಯಮದಂತೆ ಪಠ್ಯಪುಸ್ತಕಗಳನ್ನು ಉಪಯೋಗಿಸಬಹುದು. ವಸ್ತುನಿಷ್ಠ ಬಹು ಆಯ್ಕೆ ಮಾದರಿಯ ಪರೀಕ್ಷೆಗೆ ನೀಡಲಾಗುವ ಉತ್ತರಪತ್ರಿಕೆಯ (OMR SHEET) ಮಾದರಿ ಪ್ರತಿಯನ್ನು ಕೊನೆಪುಟದಲ್ಲಿ ನೋಡಬಹುದು. ಈ ಕೆಳಕಂಡ ವಿಷಯಗಳಿಗೆ ಎಂದಿನಂತೆ ವಿವರಣಾತ್ಮಕ ಮಾದರಿಯಲ್ಲಿ ( Descriptive Type) ಪರೀಕ್ಷೆ ನಡೆಸಲಾಗುವುದು.**

1.ಎಲೆಕ್ಟ್ರಿಸಿಟಿ (ಆಡಿಟ್ ಆಂಡ್ ಅಕೌಂಟ್ಸ್) ಲಾಸ್ (ಹೈಯರ್)ಎಕ್ಸಾಮಿನೇಷನ್ ಭಾಗ–2,ಪತ್ರಿಕೆ–1
2.ಎಸ್.ಎ. ಎಸ್. ಭಾಗ–1, ಪತ್ರಿಕೆ–1
3.ಟ್ರೆಜರಿ ಅಕೌಂಟ್ಸ್ ಭಾಗ–1, ಪತ್ರಿಕೆ–1
4.ಇನ್ಸೂರೆನ್ಸ್ ಹೈಯರ್, ಪತ್ರಿಕೆ–2
5.ಇನ್ಸೂರೆನ್ಸ್ ಲೋಯರ್, ಪತ್ರಿಕೆ–2
6.ಪಿ.ಡಬ್ಲ್ಯೂ.ಡಿ. ಹೈಯರ್ ಭಾಗ–1, ಪತ್ರಿಕೆ–1
7.ಸೆಕ್ರೆಟರಿಯಟ್ ಮ್ಯಾನ್ಯುಯಲ್ ಭಾಗ–2
8.ಕನ್ನಡಭಾಷೆ, ಪತ್ರಿಕೆ–1 ಮತ್ತು 2
9.ಕನ್ನಡಭಾಷೆ (ಐ.ಎ.ಎಸ್, ಐ.ಪಿ.ಎಸ್ ಮತ್ತು ಐ.ಎಫ್.ಎಸ್ ಅಧಿಕಾರಿಗಳಿಗೆ)ಪತ್ರಿಕೆ–1 ಮತ್ತು2.
10.ಟ್ರಾನ್ಸಲೇಷನ್ ಟೆಸ್ಟ್
11.ಪ್ರೆಸ್ ಆಂಡ್ ಅಲೈಡ್ ಆಫೀಸಸ್ ಮ್ಯಾನ್ಯುಯಲ್ ಹೈಯರ್, ಪತ್ರಿಕೆ–2

**3. ಅರ್ಜಿ ನಮೂನೆಗಳು:**

ಎ) ಇಲಾಖಾ ಪರೀಕ್ಷೆಗಳ ಅರ್ಜಿ ನಮೂನೆಗಳು ಸರ್ಕಾರಿ ಕೇಂದ್ರ ಮುಸ್ತಕಮಳಿಗೆ ಬೆಂಗಳೂರು, ಸರ್ಕಾರಿ ವಿಭಾಗೀಯ, ಜಿಲ್ಲಾ ಮುಸ್ತಕಮಳಿಗೆ ಮತ್ತು ಸರ್ಕಾರದ ಅಂಗೀಕೃತ ಮುಸ್ತಕ ವ್ಯಾಪಾರಿಗಳಲ್ಲಿ ಕ್ರಯಕ್ಕೆ ದೊರೆಯುತ್ತವೆ.

ಬಿ) ಅರ್ಜಿ ನಮೂನೆಯ ಕಾಲಂ 6 ರಲ್ಲಿ ಅಭ್ಯರ್ಥಿಗಳು ತಮ್ಮ ಹೆಸರುಗಳನ್ನು ಅವರ ಸೇವಾ ಮುಸ್ತಕದಲ್ಲಿ ಇರುವಂತೆ ಮಾತ್ರ ಬರೆಯಬೇಕು.

ಅಭ್ಯರ್ಥಿಗಳು ಪ್ರಸ್ತುತ ಅರ್ಜಿಸಲ್ಲಿಸಿರುವ ವಿಷಯಗಳಲ್ಲಿ ಹಿಂದಿನ ಎರಡು ವರ್ಷಗಳ ಅವಧಿಯೊಳಗಿನ ಅಧಿವೇಶನಗಳಲ್ಲಿ ಯಾವುದಾದರೂ ಪತ್ರಿಕೆಯಲ್ಲಿ ವಿನಾಯಿತಿ ಹೊಂದಿದ್ದಲ್ಲಿ ಅದರ ವಿವರಗಳನ್ನು ಅಂದರೆ ವಿನಾಯಿತಿ ಪಡೆದ ಪತ್ರಿಕೆ, ನೋಂದಣಿ ಸಂಖ್ಯೆ, ಅಧಿವೇಶನ ಮತ್ತು ಪರೀಕ್ಷಾಕೇಂದ್ರ ಇತ್ಯಾದಿಗಳನ್ನು ಅರ್ಜಿಯ ಕಾಲಂ (13)ರ ಅಂಕಣದಲ್ಲಿ ನಿರ್ದಿಷ್ಟವಾಗಿ ನಮೂದಿಸಬೇಕು. ಇಲ್ಲವಾದಲ್ಲಿ ಫಲಿತಾಂಶವನ್ನು ಸಿದ್ಧಪಡಿಸುವಾಗ ಹಿಂದೆ ಪಡೆದ ವಿನಾಯಿತಿಯನ್ನು ಪರಿಗಣಿಸಲಾಗುವುದಿಲ್ಲ. ಕನ್ನಡಭಾಷಾ ಪರೀಕ್ಷೆ ಪತ್ರಿಕೆ–1 ಮತ್ತು ಪತ್ರಿಕೆ–2 ರಲ್ಲಿ ವಿನಾಯಿತಿ ಪಡೆದಿದ್ದಲ್ಲಿ ಮೌಖಿಕ ಸಂದರ್ಶನಕ್ಕೆ ಹಾಜರಾಗಲು ವಿನಾಯಿತಿ ಪಡೆದ ವಿವರಗಳೊಂದಿಗೆ ಅರ್ಜಿಯನ್ನು ಕಡ್ಡಾಯವಾಗಿ ಸಲ್ಲಿಸಬೇಕು. ಇಲ್ಲದಿದ್ದಲ್ಲಿ ವಿನಾಯಿತಿಯನ್ನು ಪರಿಗಣಿಸುವುದಿಲ್ಲ.

**ವಿಶೇಷ ಸೂಚನೆ:–** (1) ಅಭ್ಯರ್ಥಿಗಳು ತಮ್ಮ ಅರ್ಜಿಯ ಮುಖಪುಟದಲ್ಲಿ ಹೆಸರು, ಮತ್ತು ವಿಳಾಸಗಳನ್ನು ಗಣಕಯಂತ್ರದಲ್ಲಿ ಮುದ್ರಿಸಲು ಅನುಕೂಲವಾಗಬೇಕಿರುವುದರಿಂದ ಕನ್ನಡಭಾಷೆಯಲ್ಲಿಯೇ ಭರ್ತಿಮಾಡತಕ್ಕದು.

**ಆಯೋಗವು ನಡೆಸುವ ಇಲಾಖಾ ಪರೀಕ್ಷೆಗಳಿಗೆ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ಮೊದಲ ಪ್ರಯತ್ನದಿಂದಲೇ ಕಡ್ಡಾಯವಾಗಿ ಈ ಕೆಳಗೆ ನಿಗದಿಪಡಿಸಿರುವ ಪರೀಕ್ಷಾ ಶುಲ್ಕವನ್ನು ಅರ್ಜಿಯೊಂದಿಗೆ ಡಿ.ಡಿ. ಮೂಲಕವೇ ಪಾವತಿಸತಕ್ಕದ್ದು. ತಪ್ಪಿದ್ದಲ್ಲಿ ಅಂತಹ ಅರ್ಜಿಯನ್ನು ತಿರಸ್ಕರಿಸಲಾಗುವುದು.**

**4. ಶುಲ್ಕ:** (ಎ) ವಿವಿಧ ಇಲಾಖಾ ಪರೀಕ್ಷೆಗಳಿಗೆ ನಿಗದಿಪಡಿಸಲಾದ ಶುಲ್ಕದ ವಿವರ:–

| ಕ್ರಮ ಸಂಖ್ಯೆ ಹಾಗೂ ವಿಷಯ ಸಂಕೇತ | ವಿ ಷ ಯ | ನಿಗದಿ ಪಡಿಸಲಾದ ಶುಲ್ಕ ರೂ. |
|---|---|---|
| 1. | ಅಕೌಂಟ್ಸ್ ಲೋಯರ್ | 25–00 |
| 2. | ಕಮ್ಯುನಿಟಿ ಡೆವಲಪ್‌ಮೆಂಟ್ ಭಾಗ–1 | 25–00 |
| 3. | ಕಮ್ಯುನಿಟಿ ಡೆವಲಪ್‌ಮೆಂಟ್ ಭಾಗ–2 | 25–00 |
| 4. | ಎಂಪ್ಲಾಯ್‌ಮೆಂಟ್ ಎಕ್ಸ್‌ಚೇಂಜ್ ಪ್ರೊಸೀಜರ್ ಹೈಯರ್ | 25–00 |
| 5. | ಎಂಪ್ಲಾಯ್‌ಮೆಂಟ್ ಎಕ್ಸ್‌ಚೇಂಜ್ ಪ್ರೊಸೀಜರ್ ಲೋಯರ್ | 25–00 |
| 6. | ಫಾರೆಸ್ಟ್ ಪತ್ರಿಕೆ–1 (ಫಾರೆಸ್ಟ್‌ಗಾರ್ಡ್‌ಗಳಿಗೆ ಮಾತ್ರ) | 25–00 |
| 7. | ಫಾರೆಸ್ಟ್ ಪತ್ರಿಕೆ–2 (ಫಾರೆಸ್ಟ್‌ಗಾರ್ಡ್‌ಗಳಿಗೆ ಮಾತ್ರ) | 25–00 |
| 8. | ಜನರಲ್ ಲಾ ಭಾಗ–2 | 25–00 |
| 9. | ಹೋಮ್ ಗಾರ್ಡ್ಸ್ ಮ್ಯಾನ್ಯುಯಲ್ | 25–00 |
| 10. | ಆಕ್ಟ್ ಅಂಡ್ ರೂಲ್ಸ್ ರಿಲೇಟಿಂಗ್ ಟು ವಿಮೆನ್ ಆಂಡ್ ಚೈಲ್ಡ್ ಡೆವೆಲಪ್‌ಮೆಂಟ್ | 25–00 |
| 11. | ಮೋಟಾರ್ ವೆಹಿಕಲ್ಸ್ | 25–00 |
| 12. | ಮೈನಿಂಗ್ ಭಾಗ–1 | 25–00 |
| 13. | ಮೈನಿಂಗ್ ಭಾಗ–2 | 25–00 |
| 14. | ಪ್ರಿಸನ್ಸ್ | 25–00 |
| 15. | ಪೋರ್ಟ್ಸ್ ಹೈಯರ್ | 25–00 |
| 16. | ಪೋರ್ಟ್ಸ್ ಲೋಯರ್ | 25–00 |
| 17. | ಸೋಷಿಯಲ್ ವೆಲ್‌ಫೇರ್ ಆಂಡ್ ಬ್ಯಾಕ್‌ವರ್ಡ್ ಕ್ಲಾಸಸ್ ಮ್ಯಾನ್ಯುಯಲ್ ಭಾಗ–1 | 25–00 |
| 18. | ಸೋಷಿಯಲ್ ವೆಲ್‌ಫೇರ್ ಆಂಡ್ ಬ್ಯಾಕ್‌ವರ್ಡ್ ಕ್ಲಾಸಸ್ ಮ್ಯಾನ್ಯುಯಲ್ ಭಾಗ–2 | 25–00 |
| 19. | ಯೂಥ್ ಸರ್ವೀಸ್ ಮ್ಯಾನುಯಲ್ | 25–00 |
| 20. | ಎಕ್ಸೈಸ್ | 25–00 |
| 21. | ಪೊಲೀಸ್ ಮ್ಯಾನ್ಯುಯಲ್ | 25–00 |
| 22. | ಅಕೌಂಟ್ಸ್ ಹೈಯರ್ | 50–00 |

| ಕ್ರಮ ಸಂಖ್ಯೆ ಹಾಗೂ ವಿಷಯ ಸಂಕೇತ | ವಿ ಷ ಯ | ನಿಗದಿ ಪಡಿಸಲಾದ ಶುಲ್ಕ ರೂ. |
|---|---|---|
| 23. | ಕಮರ್ಷಿಯಲ್ ಟ್ಯಾಕ್ಸ್ ಭಾಗ–2 (ಲೋಯರ್) | 50–00 |
| 24. | ಫಾರೆಸ್ಟ್ | 50–00 |
| 25. | ಫ್ಯಾಕ್ಟರೀಸ್ ಆಂಡ್ ಬಾಯ್ಲರ್ಸ್ ಲಾಸ್ | 50–00 |
| 26. | ಲೇಬರ್ | 50–00 |
| 27. | ಲೋಕಲ್ ಲಾಸ್ ಆಂಡ್ ಕಮರ್ಷಿಯಲ್ ಬುಕ್ ಕೀಪಿಂಗ್ | 50–00 |
| 28. | ಪ್ರೆಸ್ ಆಂಡ್ ಅಲೈಡ್ ಆಫೀಸಸ್ ಮ್ಯಾನ್ಯುಯಲ್ ಹೈಯರ್ | 50–00 |
| 29. | ಪ್ರೆಸ್ ಆಂಡ್ ಅಲೈಡ್ ಆಫೀಸಸ್ ಮ್ಯಾನ್ಯುಯಲ್ ಲೋಯರ್ | 50–00 |
| 30. | ಪಿ.ಡಬ್ಲ್ಯೂ.ಡಿ ಹೈಯರ್ ಭಾಗ–1 | 50–00 |
| 31. | ಪಿ.ಡಬ್ಲ್ಯೂ.ಡಿ ಹೈಯರ್ ಭಾಗ–2 | 50–00 |
| 32. | ಪಿ.ಡಬ್ಲ್ಯೂ.ಡಿ ಲೋಯರ್ | 50–00 |
| 33. | ರಿಜಿಸ್ಟ್ರೇಷನ್ | 50–00 |
| 34. | ಸಿರಿಕಲ್ಚರ್ | 50–00 |
| 35. | ಕೋ–ಆಪರೇಷನ್ | 50–00 |
| 36. | ಜನರಲ್ ಲಾ ಭಾಗ–1 | 50–00 |
| 37. | ಮುನಿಸಿಪಲ್ ಆಂಡ್ ಲೋಕಲ್ ಬೋರ್ಡ್ಸ್ | 50–00 |
| 38. | ಮಾರ್ಕೆಟಿಂಗ್ | 50–00 |
| 39. | ರೆವಿನ್ಯೂ ಹೈಯರ್ ಭಾಗ–1 | 50–00 |
| 40. | ರೆವಿನ್ಯೂ ಹೈಯರ್ ಭಾಗ–2 | 50–00 |
| 41. | ರೆವಿನ್ಯೂ ಲೋಯರ್ | 50–00 |
| 42. | ಕಮರ್ಷಿಯಲ್ ಟ್ಯಾಕ್ಸ್ ಭಾಗ–1 ಹೈಯರ್ | 50–00 |
| 43. | ಕೋ–ಆಪರೇಟಿವ್ ಆಡಿಟ್ | 50–00 |
| 44. | ಇನ್ಸೂರೆನ್ಸ್ ಅಡ್ವಾನ್ಸಡ್ | 50–00 |
| 45. | ಇನ್ಸೂರೆನ್ಸ್ ಹೈಯರ್ | 50–00 |
| 46. | ಇನ್ಸೂರೆನ್ಸ್ ಲೋಯರ್ | 50–00 |
| 47. | ಕನ್ನಡ | 50–00 |
| 48. | ಫುಡ್ ಆಂಡ್ ಸಿವಿಲ್ ಸಪ್ಲೈಸ್ ಎಕ್ಸಾಮಿನೇಷನ್ | 50–00 |
| 49. | ಕರ್ನಾಟಕ ಕನ್ಸ್ಯೂಮರ್ ಪ್ರೋಟಕ್ಷನ್ಸ್ ಸ್ಟೇಟ್ ಕಮಿಷನ್ ಅಂಡ್ ಡಿಸ್ಟ್ರಿಕ್ ಫೋರಮ್ ಸರ್ವಿಸ್ ಎಕ್ಸಾಮಿನೇಶನ್ | 50–00 |
| 51. | ಇಂಡಿಯನ್ ಕಾಂಟ್ರಕ್ಟ್ ಆಕ್ಟ್ | 25–00 |
| 52. | ಕೆ.ಪಿ.ಎಸ್.ಸಿ. ಮ್ಯಾನ್ಯುಯಲ್ | 25–00 |
| 53. | ಕೆ.ಪಿ.ಎಸ್.ಸಿ. ರೆಕ್ರೂಟ್‌ಮೆಂಟ್ ರೂಲ್ಸ್ | 25–00 |
| 54. | ಸೆಕ್ರೆಟೇರಿಯಟ್ ಮ್ಯಾನ್ಯುಯಲ್ ಭಾಗ–1 | 50–00 |
| 55. | ಸೆಕ್ರೆಟೇರಿಯಟ್ ಮ್ಯಾನ್ಯುಯಲ್ ಭಾಗ–2 | 25–00 |
| 56. | ಸ್ಪೆಷಲ್ ಲಾಸ್ ಆಂಡ್ ಸರ್ವೀಸ್ ರೂಲ್ಸ್ | 25–00 |
| 58. | ಟ್ರಾನ್ಸಲೇಷನ್ ಟೆಸ್ಟ್ | 25–00 |
| 61. | ಎಸ್.ಎ.ಎಸ್ ಭಾಗ–1 | 50–00 |
| 62. | ಎಸ್.ಎ.ಎಸ್ ಭಾಗ–2 | 50–00 |
| 63. | ಎಸ್.ಎ.ಎಸ್ ಭಾಗ–3 | 50–00 |
| 64. | ಟ್ರೆಜರಿ ಅಕೌಂಟ್ಸ್ ಭಾಗ–1 | 50–00 |
| 65. | ಟ್ರೆಜರಿ ಅಕೌಂಟ್ಸ್ ಭಾಗ–2 | 50–00 |

| ಕ್ರಮ ಸಂಖ್ಯೆ ಹಾಗೂ ವಿಷಯ ಸಂಕೇತ | ವಿ ಷ ಯ | ನಿಗದಿ ಪಡಿಸಲಾದ ಶುಲ್ಕ ರೂ. |
|---|---|---|
| 66. | ಎಲೆಕ್ಟ್ರಿಸಿಟಿ ಲಾಸ್ ಎಕ್ಸಾಮಿನೇಷನ್ | 50–00 |
| 67. | ಎಲೆಕ್ಟ್ರಿಸಿಟಿ (ಆಡಿಟ್ ಆಂಡ್ ಅಕೌಂಟ್ಸ್) ಲಾಸ್ (ಹೈಯರ್) ಎಕ್ಸಾಮಿನೇಷನ್ ಭಾಗ–1 | 25–00 |
| 68. | ಎಲೆಕ್ಟ್ರಿಸಿಟಿ (ಆಡಿಟ್ ಆಂಡ್ ಅಕೌಂಟ್ಸ್) ಲಾಸ್ (ಹೈಯರ್) ಭಾಗ–2 | 25–00 |
| 70. | ಎಲೆಕ್ಟ್ರಿಸಿಟಿ (ಆಡಿಟ್ ಆಂಡ್ ಅಕೌಂಟ್ಸ್) ಲಾಸ್ (ಲೋಯರ್) ಎಕ್ಸಾಮಿನೇಷನ್ | 25–00 |
| 71. | ಕರ್ನಾಟಕ ಅಡ್ಮಿನಿಸ್ಟ್ರೇಟಿವ್ ಟ್ರಿಬ್ಯೂನಲ್ ಎಕ್ಸಾಮಿನೇಷನ್ | 25–00 |
| 72. | ಕನ್ನಡಭಾಷೆ (ಐ.ಎ.ಎಸ್, ಐ.ಪಿ.ಎಸ್ ಮತ್ತು ಐ.ಎಫ್.ಎಸ್ ಅಧಿಕಾರಿಗಳಿಗೆ) | 50–00 |
| 73. | ಕನ್ನಡ ಭಾಷಾ ಮೌಖಿಕ ಪರೀಕ್ಷೆ | –– |

ಬಿ) ಯಾವುದೇ ಸ್ಥಳೀಯ ಪ್ರಾಧಿಕಾರದ ಅಥವಾ ಕಾನೂನು ಮೇರೆಗೆ ರಚಿಸಲಾದ ನಿಗಮಗಳಲ್ಲಿ ಸೇವೆಸಲ್ಲಿಸುತ್ತಿರುವ ಅಭ್ಯರ್ಥಿಗಳು ನಿಗದಿತ ಶುಲ್ಕಗಳನ್ನು ಸಂದಾಯ ಮಾಡಿದಲ್ಲಿ ಮಾತ್ರ ಅವರಿಗೆ ಅನ್ವಯವಾಗುವ ಸೇವೆಯ ನೇಮಕಾತಿ ಷರತ್ತುಗಳನ್ನೊಳಗೊಂಡಂತೆ ಅವರು ತೇರ್ಗಡೆಯಾಗಬೇಕಾಗಿರುವಂತಹ ಸೇವಾ ಪರೀಕ್ಷೆಗಳಿಗೆ ಹಾಜರಾಗಲು ಅರ್ಹರಾಗುತ್ತಾರೆ.

ಸಿ) ಕೇಂದ್ರ ಪರಿಹಾರ ಸಮಿತಿಯು ಸರ್ಕಾರದ ಸ್ವಾಮ್ಯಕ್ಕೊಳಪಟ್ಟಿರುವ ಸಂಸ್ಥೆಯಾಗಿರುವ ಕಾರಣ ಅಲ್ಲಿಯ ಸಿಬ್ಬಂದಿಗೆ ಇಲಾಖಾ ಪರೀಕ್ಷೆಗಳಾದ ಅಕೌಂಟ್ಸ್ ಹೈಯರ್, ಅಕೌಂಟ್ಸ್ ಲೋಯರ್, ಜನರಲ್ ಲಾ ವಿಷಯಗಳು ಅಲ್ಲದೆ ಅವರುಗಳೂ ನಿಗದಿಪಡಿಸಿರುವ ವಿಷಯಗಳಲ್ಲಿ ತೇರ್ಗಡೆಯಾಗಬೇಕಿರುವಂತಹ ಸೇವಾ ಪರೀಕ್ಷೆಗಳಿಗೆ ಹಾಜರಾಗಲು ಅರ್ಹರಾಗುತ್ತಾರೆ.

ಡಿ) ಸ್ಥಳೀಯ ಅಭ್ಯರ್ಥಿಗಳು, ಸ್ಟೈಪೆಂಡರಿ ಪದವೀಧರರು, ದೈನಿಕ ಮುಜರಾಯಿ ಮಾಸಿಕ ವೇತನದ ಮೇಲೆ ಕೆಲಸ ಮಾಡುತ್ತಿರುವ ವ್ಯಕ್ತಿಗಳು ಮತ್ತು ಕರಾರು ಆಧಾರದಲ್ಲಿ ಮತ್ತು ಅನುದಾನಿತ ಸಂಸ್ಥೆಗಳಲ್ಲಿ ಕೆಲಸ ಮಾಡುತ್ತಿರುವ ವ್ಯಕ್ತಿಗಳು ಈ ಪರೀಕ್ಷೆಗಳಿಗೆ ಅರ್ಜಿ ಸಲ್ಲಿಸಲು ಅರ್ಹರಾಗುವುದಿಲ್ಲ.

ಇ) ಸೇವಾ ಪರೀಕ್ಷೆಗೆ ಅರ್ಜಿ ಸಲ್ಲಿಸುವ ಪ್ರತಿಯೊಬ್ಬ ಅಭ್ಯರ್ಥಿಯ ಅರ್ಜಿಯನ್ನು ಅಭ್ಯರ್ಥಿಯು ಸೇವೆಸಲ್ಲಿಸುತ್ತಿರುವ ಕಛೇರಿ ಮುಖ್ಯಸ್ಥರು ಸತ್ಯಾಪನೆ ಮಾಡಿ ದೃಢೀಕರಿಸತಕ್ಕದ್ದು.

ಈ) ಎಂಪ್ಲಾಯ್‌ಮೆಂಟ್ ಎಕ್ಸ್‌ಚೇಂಜ್ ಪ್ರೊಸೀಜರ್ ಹೈಯರ್ ಮತ್ತು ಲೋಯರ್ ವಿಷಯಗಳ ಪರೀಕ್ಷೆಯಲ್ಲಿ " ಉದ್ಯೋಗ ಮತ್ತು ತರಬೇತಿ ಮಹಾ ನಿರ್ದೇಶನಾಲಯ ನವದೆಹಲಿ ಇವರು ಪ್ರಕಟಿಸಿರುವ ಎಂಪ್ಲಾಯ್‌ಮೆಂಟ್ ಸರ್ವೀಸ್ ಮ್ಯಾನ್ಯುಯಲ್" ಪುಸ್ತಕವನ್ನು ಉಪಯೋಗಿಸಲು ಅನುಮತಿ ನೀಡಲಾಗಿದೆ.

ಎಫ್) ಸರ್ಕಾರವು ಅಧಿಸೂಚನೆ ಸಂಖ್ಯೆ: ಡಿಪಿಎಆರ್ 4 ಎಸ್‌ಎಸ್‌ಆರ್ 2007 ದಿನಾಂಕ: 26–04–2008ರಲ್ಲಿ ಕರ್ನಾಟಕ ನಾಗರೀಕ ಸೇವಾ (ಸೇವೆಗಳು ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಗಳು, 1974ರ ಅನುಸೂಚಿ–**I** ಮತ್ತು **II**ರಲ್ಲಿ ನಿಗದಿಪಡಿಸಿರುವ ವಿವಿಧ ವಿಷಯಗಳ ಪಠ್ಯ ಕ್ರಮಕ್ಕೆ ತಿದ್ದುಪಡಿ ಮಾಡಿರುವ ವಿವರಗಳನ್ನು ಈ ಕೆಳಗೆ ನೀಡಿದೆ.

**1. Title and commencement**:- (1) These rules may be called the Karnataka Civil Services (Service and Kannada Language Examinations) (First Amendment) Rules, 2008.

2. They shall come into force from the date of their publication in the Official Gazette.

**2. Amendment of SCHEDULE- I.**- In the Karnataka Civil Services (Service and Kannada Language Examinations) Rules, 1974, (hereinafter referred to as the said rules ) in **SCHEDULE-I,** under the heading " II service examination '', in the " Note'' specifying syllabi for various examinations",-

(1) Under the heading,-" 3. Revenue (Higher) Examination-Part-I" under the sub-heading Paper-II, under " Minor Acts and Rules" items (vii), and (ix) and (x) and entries relating thereto shall be omitted.

(2) Under the heading " 4. Revenue (Lower)" under sub-heading ' Paper-II' , under " Minor Acts and Rules" items (vii), (ix) and (x) and entries relating thereto shall be omitted.

(3) Under the heading "5. General Law Part-I" under sub-heading "Paper-II" ,-

(a) for serial number 3 and entries relating thereto, the following shall be substituted, namely:-

"3. Motor Vehicles Act, 1988 (Central Act 59 of 1988)."

(b) for serial number 6 and entries relating thereti, the following shall be substituted, namely:-

"6. Prevention of corruption Act, 1988 (Central Act 49 of 1988)"

(c) after serial number 8 and entries relating thereto, the following shall be inserted, namely:-

"9. The Right to Information Act, 2005 (Central Act 22 of 2005) and the rules made thereunder."

(4) Under the heading "Community Development Examination Part-II", Note (1) and (2) shall be Omitted.

(5) for the entries under the heading " 19, Marketing Examination" Under the sub-heading " Paper-II', the following shall be substituted namely:-

"The Weights and Measures (Enforcement) Act,1985 and Rules".

(6) Under the heading "22. Motor Vehicles Examination" , for Serial number 1 and the entries relating thereto the following shall be substituted, namely:-

" 1. Motor Vehicles Act, 1988 (Central Act 59 of 1988) and the Rules made thereunder".

(7) Under the heading "23. Karnataka Police Manual Examination" in chapter XLVIII,-

(a) for item (i) and entries relating thereto the following shall be substituted, namely:-

"(i) Karnataka State Police including Ministerial Services (Recruitment) Rules, 2004"

(b) item (iii) and entries relating thereto shall be omitted;

(8) The heading " 24. Stores Purchase Department Manual Examination" and the entries relating thereto shall be omitted.

(9) Under the heading "26. Departmental Examination in Mining" under sub-heading "Part-II," for item (e) and entries relating thereto, the following shall be substituted, namely:-

"(e) Karnataka Minor Mineral Concession Rules, 1994".

(10) Under the heading "36. Public Works Departmental (Higher) Examination Part-I", under the sub-heading " Paper-II" for the words, figures and brackets "Karnataka Irrigation Act, 1959 (Edition) as amended form time to time" the words, figures and brackets " Karnataka Irrigation Act, 1965 (16 of 1965)" shall be substituted.

(11) Uner the heading " 44. Examination in Recruitment Rules" for item (d) an the entries relating thereto the following shall be substituted, namely:-

"(d) The Karnataka Civil Services (Direct Recruitment by Competitive Examinations and Selection) (General) Rules, 2006."

(12) Under the heading "49. Food and Civil Supplies Examinations" under the sub-heading " Paper-II'. for Serial number 2 and the entries relating thereto the following shall be substituted namely:-

"The Weights and Measures (Enforcement) Act, 1985 and Rules".

**3. Amendment of Schedule II.-** In schedule II to the said rules, in the **TABLE,** Serial number 33 and the entries relating thereto shall be omitted.

5. **ಪರೀಕ್ಷಾ ಕೇಂದ್ರಗಳು:** ಪ್ರತಿಯೊಬ್ಬ ಅಭ್ಯರ್ಥಿಯು ಪ್ರಸ್ತುತ ಆತನು ಕೆಲಸ ಮಾಡುತ್ತಿರುವ ಜಿಲ್ಲಾ ಕೇಂದ್ರದಲ್ಲಿಯೇ ಪರೀಕ್ಷೆಗೆ ಕುಳಿತುಕೊಳ್ಳತಕ್ಕದ್ದು. ಆದರೆ, ಯಾವುದೇ ಒಬ್ಬ ಅಭ್ಯರ್ಥಿಯು ಅನಂತರ ಇತರ ಕೇಂದ್ರಕ್ಕೆ ವರ್ಗಾವಣೆಯಾದಲ್ಲಿ ಅಥವಾ ಅವನು ತನ್ನ ಕೇಂದ್ರ ಕಾರ್ಯಸ್ಥಾನದ ಹೊರಗೆ ಗಳಿಕೆ ರಜೆಯ ಮೇಲಿರುವುದು ಮುಂತಾದ ನಿರ್ದಿಷ್ಟ ವಿಶೇಷ ಕಾರಣಗಳಿದ್ದಲ್ಲಿ ಆಯೋಗವು ಅಂತಹ ಅಭ್ಯರ್ಥಿಗಳಿಗೆ ಬೇರೆ ಕೇಂದ್ರಗಳಲ್ಲಿ ಪರೀಕ್ಷೆಗೆ ಹಾಜರಾಗುವುದಕ್ಕೆ ಕ್ರಮತೆಗೆದುಕೊಳ್ಳಲಾಗುವುದು. ಆಯೋಗದ ನಿರ್ದಿಷ್ಟ ಅನುಮತಿ ಇಲ್ಲದೆ ಅಭ್ಯರ್ಥಿಗಳು ಬೇರೆ ಕೇಂದ್ರದಲ್ಲಿ ಪರೀಕ್ಷೆಗಳನ್ನು ತೆಗೆದುಕೊಳ್ಳುವಂತಿಲ್ಲ. ಆ ರೀತಿ ಮಾಡಿದ ಅಭ್ಯರ್ಥಿಗಳು ಆಯೋಗ ತೆಗೆದುಕೊಳ್ಳುವ ಕ್ರಮಕ್ಕೆ ಹೊಣೆಯಾಗುವರು.

ಎ(1) ಖಜಾನೆ ಅಕೌಂಟ್ಸ್ ಮತ್ತು ಸಬಾರ್ಡಿನೇಟ್ ಅಕೌಂಟ್ಸ್ ಸರ್ವೀಸ್ ಪರೀಕ್ಷೆಗಳನ್ನು ಹಾಗೂ ಇಲೆಕ್ಟ್ರಿಸಿಟಿ, ಐಎಎಸ್, ಐಪಿಎಸ್ ಮತ್ತು ಐಎಫ್ಎಸ್ ಅಧಿಕಾರಿಗಳಿಗೆ ಕನ್ನಡ ಭಾಷಾ ಪರೀಕ್ಷೆಗಳನ್ನು **ಬೆಂಗಳೂರು ಕೇಂದ್ರದಲ್ಲಿ ಮಾತ್ರ ನಡೆಸಲಾಗುವುದು.**

(2) ಸಬಾರ್ಡಿನೇಟ್ ಅಕೌಂಟ್ಸ್ ಸೇವಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗಬೇಕಾದ ನೌಕರರು ಅವರ ನೇಮಕದ ದಿನಾಂಕದಿಂದ ಪ್ರಥಮ ದರ್ಜೆ ಸಹಾಯಕರಾಗಿ ಮೂರು ವರ್ಷಗಳಿಗಿಂತ ಕಡಿಮೆ ಇರದ ಅಥವಾ ದ್ವಿತೀಯ ದರ್ಜೆ ಸಹಾಯಕರಾಗಿ ಆರು ವರ್ಷಗಳಿಗಿಂತ ಕಡಿಮೆ ಇರದ ಅವಧಿಯ ಸೇವೆ ಸಲ್ಲಿಸಿದ್ದು ಅಕೌಂಟ್ಸ್ ಹೈಯರ್

ಅಥವಾ ತತ್ಸಮಾನ ಪರೀಕ್ಷೆಯಲ್ಲಿ ತೇರ್ಗಡೆಯಾಗಿದ್ದಲ್ಲಿ ಮಾತ್ರ ಸದರಿ ಪರೀಕ್ಷೆಗೆ ಕುಳಿತುಕೊಳ್ಳಲು ಅರ್ಹರಾಗಿರುತ್ತಾರೆ.

ಬಿ) ಸಚಿವಾಲಯದ ಕೈಪಿಡಿ ಪರೀಕ್ಷೆ, ಭಾಷಾಂತರ ಇಲಾಖೆಯ ಭಾಷಾಂತರ ಪರೀಕ್ಷೆ ಭಾರತದ ಕರಾರು ಅಧಿನಿಯಮ, ವಿಶೇಷ ಕಾನೂನು ಮತ್ತು ಸೇವಾ ಪರೀಕ್ಷೆಗಳು, ಕರ್ನಾಟಕ ಲೋಕಸೇವಾ ಆಯೋಗದ ಕೈಪಿಡಿ, ಕರ್ನಾಟಕ ಲೋಕಸೇವಾ ಆಯೋಗದ ನೇಮಕಾತಿ ನಿಯಮಗಳ ಪರೀಕ್ಷೆಗಳು ಮತ್ತು ಕರ್ನಾಟಕ ಅಡ್ಮಿನಿಸ್ಟ್ರೇಟಿವ್ ಟ್ರಿಬ್ಯೂನಲ್ ಪರೀಕ್ಷೆಗಳು ಬೆಂಗಳೂರು ಕೇಂದ್ರದಲ್ಲಿ ಮಾತ್ರ ನಡೆಸಲಾಗುವುದು.

ಸಿ) ಮುದ್ರಣಾಲಯ ಕೈಪಿಡಿಯ ಹೈಯರ್ ಮತ್ತು ಲೋಯರ್ ಪರೀಕ್ಷೆಗಳು ಬೆಂಗಳೂರು, ಮೈಸೂರು, ಧಾರವಾಡ, ಮಡಿಕೇರಿ ಮತ್ತು ಗುಲ್ಬರ್ಗಾ ಕೇಂದ್ರಗಳಲ್ಲಿ ಮಾತ್ರ ನಡೆಸಲಾಗುವುದು.

ಡಿ) ಬಂದರುಗಳ ಇಲಾಖೆಯ ಹೈಯರ್ ಮತ್ತು ಲೋಯರ್ ಪರೀಕ್ಷೆಗಳು ಮಂಗಳೂರು ಮತ್ತು ಕಾರವಾರ ಕೇಂದ್ರಗಳಲ್ಲಿ ಮಾತ್ರ ನಡೆಸಲಾಗುವುದು.

ಇ) ಉಳಿದಂತೆ ಇತರೆ ಪರೀಕ್ಷೆಗಳು ಈ ಕೆಳಕಂಡ ಜಿಲ್ಲಾ ಕೇಂದ್ರಗಳಲ್ಲಿ ನಡೆಯಲಿದ್ದು, ಜಿಲ್ಲಾ ಸಂಕೇತ ಸಂಖ್ಯೆಗಳನ್ನು ಅವುಗಳ ಎದುರಿಗೆ ನೀಡಿದೆ. ಈ ಸಂಕೇತ ಸಂಖ್ಯೆಗಳನ್ನು ಅರ್ಜಿಯಲ್ಲಿ ಕಡ್ಡಾಯವಾಗಿ ನಮೂದಿಸತಕ್ಕದ್ದು:–

| ಜಿಲ್ಲೆ | ಸಂಕೇತ | ಜಿಲ್ಲೆ | ಸಂಕೇತ |
|---|---|---|---|
| ಬೆಂಗಳೂರು | 01 | ಹಾವೇರಿ | 16 |
| ಬೆಳಗಾವಿ | 02 | ಕಾರವಾರ | 17 |
| ಬಳ್ಳಾರಿ | 03 | ಕೋಲಾರ | 18 |
| ಬೀದರ್ | 04 | ಕೊಪ್ಪಳ | 19 |
| ಬಿಜಾಪುರ | 05 | ಮಂಡ್ಯ | 20 |
| ಬಾಗಲಕೋಟೆ | 06 | ಮಂಗಳೂರು | 21 |
| ಚಾಮರಾಜನಗರ | 07 | ಮಡಿಕೇರಿ | 22 |
| ಚಿಕ್ಕಬಳ್ಳಾಪುರ | 08 | ಮೈಸೂರು | 23 |
| ಚಿಕ್ಕಮಗಳೂರು | 09 | ರಾಮನಗರ | 24 |
| ಚಿತ್ರದುರ್ಗ | 10 | ರಾಯಚೂರು | 25 |
| ಧಾರವಾಡ | 11 | ಶಿವಮೊಗ್ಗ | 26 |
| ದಾವಣಗೆರೆ | 12 | ತುಮಕೂರು | 27 |
| ಗುಲ್ಬರ್ಗಾ | 13 | ಉಡುಪಿ | 28 |
| ಗದಗ್ | 14 | ನವದೆಹಲಿ | 29 |
| ಹಾಸನ | 15 | ಮಸ್ಸೂರಿ | 30 |

6. **ಕೇಂದ್ರದ ಬದಲಾವಣೆ:** ಪರೀಕ್ಷಾ ಕೇಂದ್ರದ ಬದಲಾವಣೆಗೆ ಸಲ್ಲಿಸುವ ಕೋರಿಕೆಗಳನ್ನು ಪರೀಕ್ಷೆ ಪ್ರಾರಂಭವಾಗುವ ಕನಿಷ್ಠ 15 ದಿನಗಳ ಮೊದಲು ಸಲ್ಲಿಸತಕ್ಕದ್ದು. ಆ ದಿನಾಂಕದ ತರುವಾಯ ಸಲ್ಲಿಸಲ್ಪಡುವ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ. ಅಧಿಕೃತ ಕಾರಣಗಳ ಮೇಲೆ ಕೇಂದ್ರ ಬದಲಾವಣೆಗೆ ಅರ್ಜಿ ಸಲ್ಲಿಸುವ ನೌಕರರು ವರ್ಗಾವಣೆಯ ಅಥವಾ ಸ್ಥಳ ನಿಯುಕ್ತಿಯ ಆದೇಶಗಳ ದೃಢೀಕೃತ ನಕಲನ್ನು ಅಥವಾ ಸಂದರ್ಭಾನುಸಾರ ಗಳಿಕೆರಜೆ ಮಂಜೂರು ಮಾಡಲಾದ ಅಧಿಕೃತ ಜ್ಞಾಪನಪತ್ರದ ದೃಢೀಕೃತ ನಕಲಿನೊಂದಿಗೆ ಆ ಬಗ್ಗೆ ಪಡೆದ ಪ್ರಮಾಣ ಪತ್ರವನ್ನು ಲಗತ್ತಿಸತಕ್ಕದ್ದು. ಸ್ವವಿಳಾಸ ಬರೆದ ಹಾಗೂ ಅವಶ್ಯಕ ಅಂಚೆಚೀಟಿ ಹಚ್ಚಲಾದ ಲಕೋಟೆಯನ್ನು ಪತ್ರ ವ್ಯವಹಾರಕ್ಕಾಗಿ ಲಗತ್ತಿಸತಕ್ಕದ್ದು. (ರಿಜಿಸ್ಟರ್ಡ್ ಅಂಚೆಯಲ್ಲಿ ಕಳುಹಿಸಬೇಕಾದರೆ ಅದಕ್ಕೆ ತಗಲುವ ಸಾಕಷ್ಟು ಅಂಚೆಚೀಟಿ ಹಚ್ಚಿರಬೇಕು).

ಎ) ಅಭ್ಯರ್ಥಿಗಳು ಸೇವಾ ಪರೀಕ್ಷೆಗಳನ್ನು ಆಂಗ್ಲಭಾಷೆಯಲ್ಲಿ ಅಥವಾ ಕನ್ನಡದಲ್ಲಿ ಉತ್ತರಿಸಲು ಅನುಮತಿಸಲಾಗುವುದು.

ಬಿ) ಅಭ್ಯರ್ಥಿಯು ಉತ್ತರಗಳನ್ನು ಬರೆಯಲು ಆಂಗ್ಲ ಅಥವಾ ಕನ್ನಡದ ಯಾವುದೇ ಒಂದು ಮಾಧ್ಯಮವನ್ನು ಮಾತ್ರ ಆಯ್ಕೆ ಮಾಡಿಕೊಳ್ಳತಕ್ಕದ್ದು. ಅರ್ಧ ಆಂಗ್ಲಭಾಷೆಯಲ್ಲಿ ಮತ್ತು ಅರ್ಧ ಕನ್ನಡದಲ್ಲಿ ಉತ್ತರಿಸಿದಲ್ಲಿ ಅಂತಹ ಪತ್ರಿಕೆಗಳನ್ನು ಮೌಲ್ಯಮಾಪನ ಮಾಡಲಾಗುವುದಿಲ್ಲ.

ಸಿ) ಓಎಂಆರ್ ಉತ್ತರ ಹಾಳೆಯಲ್ಲಿ ನಿಗದಿತ ಸ್ಥಳದಲ್ಲಿ ಅಭ್ಯರ್ಥಿ ನೋಂದಣಿ ಸಂಖ್ಯೆ ಮತ್ತು ವರ್ಷನ್ ಕೋಡನ್ನು ಸರಿಯಾಗಿ ನಮೂದಿಸಿ ಗುರುತಿಸಬೇಕು. ಇಲ್ಲವಾದಲ್ಲಿ ಅಂತಹ ಓ.ಎಂ.ಆರ್. ಉತ್ತರಪತ್ರಿಕೆಯನ್ನು ಮೌಲ್ಯಮಾಪನ ಮಾಡಲಾಗುವುದಿಲ್ಲ.

6. ಎ) ಮಾನ್ಯತೆ ಪಡೆದ ಯಾವುದೇ ವಿಶ್ವವಿದ್ಯಾಲಯದ ಎಲ್.ಎಲ್.ಬಿ., ಅಥವಾ ಬಿ.ಎಲ್ ಪದವಿ ಪಡೆದಂತಹ ಕಾನೂನು ಪದವೀಧರರಿಗೆ ಜನರಲ್ ಲಾ ಭಾಗ–1ರ ಪತ್ರಿಕೆ–(1) ಕ್ಕೂ ಮತ್ತು ಜನರಲ್ ಲಾ ಭಾಗ–2 ಕ್ಕೂ ಹಾಗೂ ಬಿ.ಕಾಂ. ಅಥವಾ ಐ.ಕಾಂ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಅಡ್ವಾನ್ಸ್‌ಡ್ ಅಕೌಂಟೆನ್ಸಿ ಅಥವಾ ಫೈನಾನ್ಸಿಷಿಯಲ್ ಅಕೌಂಟೆನ್ಸಿ ವಿಷಯದಲ್ಲಿ ತೇರ್ಗಡೆಯಾದವರಿಗೆ ಕಮರ್ಷಿಯಲ್ ಟ್ಯಾಕ್ಸ್ ಹೈಯರ್ ವಿಷಯದ ಪತ್ರಿಕೆ–3ಕ್ಕೂ, ಕೋ–ಆಪರೇಷನ್ ವಿಷಯದ ಪತ್ರಿಕೆ–2ಕ್ಕೂ ಹಾಗೂ ಅಡ್ವಾನ್ಸ್‌ಡ್ ಅಕೌಂಟೆನ್ಸಿ ಅಥವಾ ಫೈನಾನ್ಸಿಷಿಯಲ್ ಅಕೌಂಟೆನ್ಸಿ ಓದಿ ಬಿ.ಕಾಂ., ಬಿ.ಬಿ.ಎಂ. ಅಥವಾ ತತ್ಸಮಾನ ಪದವಿ ಪರೀಕ್ಷೆಯಲ್ಲಿ ತೇರ್ಗಡೆಯಾದ ಅಭ್ಯರ್ಥಿಗಳಿಗೆ ಕೋ–ಆಪರೇಟಿವ್ ಆಡಿಟ್ ಪರೀಕ್ಷೆಯ 2ನೇ ಪತ್ರಿಕೆಗೆ ವಿನಾಯಿತಿ ಇದೆ. ಹಾಗೆಯೇ ಅಡ್ವಾನ್ಸ್‌ಡ್ ಅಕೌಂಟೆನ್ಸಿ ಅಥವಾ ಫೈನಾನ್ಸಿಷಿಯಲ್ ಅಕೌಂಟೆನ್ಸಿ ವಿಷಯವನ್ನು ಓದಿರುವ ಬಿ.ಕಾಂ. ಪದವೀಧರರಿಗೆ ಎಸ್.ಎ.ಎಸ್. ಭಾಗ–3ರ ಪತ್ರಿಕೆ–1 ಕ್ಕೂ ಹಾಗೂ ಟ್ರೆಜರಿ ಅಕೌಂಟ್ಸ್ ಭಾಗ–2ರ ಪತ್ರಿಕೆ–1ಕ್ಕೂ ವಿನಾಯಿತಿ ಇರುತ್ತದೆ. ವಿನಾಯಿತಿ ಕೋರುವ ಅಭ್ಯರ್ಥಿಗಳು ಈ ತತ್ಸಂಬಂಧ ವಿಷಯಗಳನ್ನು ಅಭ್ಯಸಿಸಿದ್ದ ಬಗ್ಗೆ ತಮ್ಮ ಅರ್ಜಿಯೊಂದಿಗೆ ಬಿ.ಕಾಂ., ಎಲ್.ಎಲ್.ಬಿ. ಅಥವಾ ತತ್ಸಮಾನ ಪದವಿಯ ದೃಢೀಕೃತ ಅಂಕಪಟ್ಟಿ ಮತ್ತು ಪದವಿ ಪ್ರಮಾಣ ಪತ್ರಗಳನ್ನು ಲಗತ್ತಿಸತಕ್ಕದ್ದು ಮತ್ತು ಅರ್ಜಿ ನಮೂನೆಯ ಅಂಕಣ 14ರಲ್ಲಿ ಖಡ್ಡಾಯವಾಗಿ ನಮೂದಿಸತಕ್ಕದ್ದು. ತಪ್ಪಿದಲ್ಲಿ ಅಂತಹ ವಿನಾಯಿತಿಗಳನ್ನು ಪರಿಗಣಿಸಲಾಗುವುದಿಲ್ಲ.

7. <u>ಪ್ರವೇಶ ಪತ್ರ:</u> ವೇಳಾಪಟ್ಟಿಯನ್ನೊಳಗೊಂಡ ಪ್ರವೇಶ ಪತ್ರವನ್ನು ಪರೀಕ್ಷೆಗೆ ಮೊದಲು ಕಳುಹಿಸಲಾಗುವುದು. ಅಭ್ಯರ್ಥಿಗಳು ಆಯೋಗದಿಂದ ನೀಡಲಾದ ಪ್ರವೇಶ ಪತ್ರಗಳನ್ನು ಜೋಪಾನ ವಾಗಿಟ್ಟಿರಬೇಕು ಮತ್ತು ಅವುಗಳನ್ನು ತಮ್ಮ ಸೇವಾ ದಾಖಲೆಗಳಲ್ಲಿ ನಮೂದನೆಗಳನ್ನು ಮಾಡು ವುದಕ್ಕಾಗಿ ಆಯೋಗದಿಂದ ನೀಡಲಾದ ತೇರ್ಗಡೆ ಪ್ರಮಾಣ ಪತ್ರದೊಂದಿಗೆ ಸಕ್ಷಮ ಪ್ರಾಧಿಕಾರಿಯ ಮುಂದೆ ಹಾಜರುಪಡಿಸತಕ್ಕದ್ದು. ಯಾವುದೇ ಸಂಧರ್ಭದಲ್ಲಿ ಪರೀಕ್ಷೆಗಳು ಮುಗಿದನಂತರ ಪ್ರವೇಶ ಪತ್ರದ ನಕಲನ್ನು ನೀಡಲಾಗುವುದಿಲ್ಲ.

8. <u>ಪಠ್ಯಪುಸ್ತಕಗಳು:</u> ಪಠ್ಯಪುಸ್ತಕಗಳನ್ನು ಉಪಯೋಗಿಸಬಹುದಾದ ಪತ್ರಿಕೆಗಳಿಗೆ ಅಭ್ಯರ್ಥಿಗಳು ಸರ್ಕಾರದಿಂದ ಪ್ರಕಾಶಿಸಲ್ಪಟ್ಟ ಪಠ್ಯಪುಸ್ತಕಗಳನ್ನು ಮತ್ತು ಖಾಸಗಿ ಪ್ರಕಾಶಕರಿಂದ ಪ್ರಕಾಶಿಸಲ್ಪಟ್ಟ ಪುಸ್ತಕಗಳನ್ನು ಸರ್ಕಾರಿ ಪ್ರಕಾಶಿತ ಪುಸ್ತಕಗಳ ಮಾದರಿಗೆ ಯಾವುದೇ ರೀತಿಯ ತದ್ವಿರುದ್ಧವಾಗಿಲ್ಲದಿದ್ದರೆ ಮತ್ತು ಕರ್ನಾಟಕ ಉಚ್ಛ ನ್ಯಾಯಾಲಯದ ದಿನಾಂಕ 3ನೇ ಡಿಸೆಂಬರ್ 1991ರ ಆದೇಶಕ್ಕೆ ಅನುಗುಣವಾಗಿದ್ದರೆ ಅಂತಹ ಪಠ್ಯಪುಸ್ತಕಗಳನ್ನು ಮಾತ್ರ ಪರೀಕ್ಷಾ ಕೇಂದ್ರಗಳಲ್ಲಿ ಉಪಯೋಗಿಸಬಹುದಾಗಿರುತ್ತದೆ. ಇತರೆ ಯಾವುದೇ ಖಾಸಗಿ ಪ್ರಕಾಶಕರ ಪಠ್ಯ ಪುಸ್ತಕಗಳನ್ನು ನಿಷೇಧಿಸಲಾಗಿದೆ.

9. <u>ತೇರ್ಗಡೆಗೆ ಗಳಿಸಬೇಕಾದ ಅಂಕಗಳು:</u>

ಎ) ಯಾವುದೇ ಸೇವಾ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಲು ಒಂದು ಪತ್ರಿಕೆಯ ಪರೀಕ್ಷೆಗೆ ಕನಿಷ್ಠ ಶೇಕಡ 40 ಅಂಕಗಳನ್ನು ಪಡೆದಿರಬೇಕು. ಒಂದಕ್ಕಿಂತ ಹೆಚ್ಚು ಪತ್ರಿಕೆಗಳಿದ್ದಲ್ಲಿ ಪ್ರತಿ ಪತ್ರಿಕೆಯಲ್ಲಿ ಕನಿಷ್ಠ ಶೇಕಡಾ 35 ಮತ್ತು ಒಟ್ಟು ಎಲ್ಲಾ ಪತ್ರಿಕೆಗಳಿಂದ ಕನಿಷ್ಠ ಶೇಕಡಾ 40 ಅಂಕಗಳನ್ನು ಪಡೆದಿರಬೇಕು. ವಿನಾಯಿತಿ ಕೋರಿದ ಬಿ.ಕಾಂ. ಹಾಗೂ ಕಾನೂನು ಪದವೀಧರರು, ಹಾಗೂ ಲೋಕಸೇವಾ ಆಯೋಗವು ನಡೆಸುವ ವಿಷಯದ ಪತ್ರಿಕೆಗಳಲ್ಲಿ ಕನಿಷ್ಠ ಶೇಕಡ 40 ಅಂಕಗಳನ್ನು ಪಡೆದಿರಬೇಕು.

ಬಿ) ಯಾವುದೇ ಪರೀಕ್ಷೆಯಲ್ಲಿ ನಿಗದಿಪಡಿಸಿದ ಗರಿಷ್ಠ ಅಂಕಗಳಲ್ಲಿ ಶೇಕಡ 60ಕ್ಕಿಂತ ಕಡಿಮೆ ಇರದಷ್ಟು ಅಂಕಗಳನ್ನು ಪಡೆದು ಉತ್ತೀರ್ಣರಾದಂತಹ ಅಭ್ಯರ್ಥಿಗಳನ್ನು ಪ್ರಥಮ ದರ್ಜೆ ಯಲ್ಲಿ ಉತ್ತೀರ್ಣರಾಗಿರುವುದಾಗಿ ಫಲಿತಾಂಶ ಘೋಷಿಸಲಾಗುವುದು.

ಸಿ) ಯಾವುದೇ ಪರೀಕ್ಷೆಯು ಒಂದಕ್ಕಿಂತ ಹೆಚ್ಚು ಪತ್ರಿಕೆಗಳನ್ನೊಳಗೊಂಡಿದ್ದು ಅಭ್ಯರ್ಥಿಯು ಆ ಪರೀಕ್ಷೆಯಲ್ಲಿ ಅನುತ್ತೀರ್ಣನಾದರೂ ಅದೇ ವಿಷಯದ ಇತರ ಪತ್ರಿಕೆಗಳಲ್ಲಿ ಆ ಪತ್ರಿಕೆಗೆ ನಿರ್ದಿಷ್ಟಪಡಿಸಲಾದ ಗರಿಷ್ಟ ಅಂಕಗಳಲ್ಲಿ ಶೇಕಡಾ ಅರವತ್ತಕ್ಕಿಂತ ಕಡಿಮೆ ಇರದಷ್ಟು ಅಂಕಗಳನ್ನು ಪಡೆದಿದ್ದಲ್ಲಿ ಅಂತಹವರನ್ನು ಆ ಪತ್ರಿಕೆಯಲ್ಲಿ ವಿನಾಯಿತಿ ಹೊಂದಿರುವರೆಂದು ಪರಿಗಣಿಸಲಾಗುವುದು. ಅಂತಹವರು ಪರೀಕ್ಷೆಗಳ ಫಲಿತಾಂಶ ಘೋಷಿಸಿದ ದಿನಾಂಕದಿಂದ ಎರಡು ವರ್ಷಗಳೊಳಗೆ ಆ ಪರೀಕ್ಷೆಯ ಉಳಿದ ಪತ್ರಿಕೆಗಳಲ್ಲಿ ತೇರ್ಗಡೆಯಾಗಲು ಅವಶ್ಯವಿರುವಷ್ಟು ಅಂಕಗಳನ್ನು ಪಡೆದು ತೇರ್ಗಡೆಯಾಗತಕ್ಕದು. ಇಲ್ಲದಿದ್ದಲ್ಲಿ ಅಂತಹ ವಿನಾಯ್ತಿಯು ರದ್ದಾಗುವುದು.

10. <u>ಹಾಜರಿ ಪ್ರಮಾಣ ಪತ್ರಗಳು:</u> ಪರೀಕ್ಷೆಗೆ ಹಾಜರಾದ ಬಗ್ಗೆ 'ಹಾಜರಾತಿ ಪ್ರಮಾಣಪತ್ರ ಪಡೆಯಬಯಸುವ ಅಭ್ಯರ್ಥಿಗಳು ಸಂಬಂಧಪಟ್ಟ ಪರೀಕ್ಷಾಕೇಂದ್ರದ ಮೇಲ್ವಿಚಾರಕರಿಂದ ಅದನ್ನು ಪರೀಕ್ಷಾ ದಿನದಂದೇ ಪಡೆಯತಕ್ಕದ್ದು. ಹಾಜರಿ ಪ್ರಮಾಣಪತ್ರವನ್ನು ಆಯೋಗದ ಕಛೇರಿಯಿಂದ ಯಾವುದೇ ಸಂದರ್ಭದಲ್ಲೂ ನೀಡಲಾಗುವುದಿಲ್ಲ.

11. <u>ಕನ್ನಡಭಾಷಾ ಲಿಖಿತ ಪರೀಕ್ಷೆಗೆ ಮೌಖಿಕ ಪರೀಕ್ಷೆ:</u>

(1) ಕನ್ನಡ ಭಾಷಾ ವಿಷಯದ ಲಿಖಿತ ಪರೀಕ್ಷೆಯಲ್ಲಿ ತೇರ್ಗಡೆಯಾದ ಅಭ್ಯರ್ಥಿಗಳಿಗೆ ಮೌಖಿಕ ಪರೀಕ್ಷೆಯನ್ನು ಆಯೋಗದ ಕೇಂದ್ರಕಛೇರಿ, ಪಾರ್ಕ್‌ಹೌಸ್, ಬೆಂಗಳೂರು–560001 ಇಲ್ಲಿ ಹಾಗೂ ಆಯೋಗದಿಂದ ನಿರ್ಧರಿಸಲಾಗುವ ಇತರ ಯಾವುದೇ ಕೇಂದ್ರದಲ್ಲಿ ನಡೆಸಲಾಗುವುದು.

**ಸೂಚನೆ:**(1) ಯಾವುದೇ ಸರ್ಕಾರಿ ನೌಕರನು/ನೌಕರಳು ಕನ್ನಡಭಾಷಾ ಲಿಖಿತ ಪರೀಕ್ಷೆಯಲ್ಲಿ ತೇರ್ಗಡೆಯಾಗದ ಹೊರತು ಕನ್ನಡ ಮೌಖಿಕ ಪರೀಕ್ಷೆಗೆ ಅರ್ಹರಾಗುವುದಿಲ್ಲ.

(2) ಸರ್ಕಾರದ ಅಧಿಸೂಚನೆ ಸಂಖ್ಯೆ ಡಿಪಿಎಆರ್ 81 ಎಸ್‌ಎಸ್‌ಆರ್ 81, ದಿನಾಂಕ 6ನೇ ಜೂನ್ 1981ರ ಮೇರೆಗೆ ಗೃಹರಕ್ಷಕ ಸಂಸ್ಥೆಯ ಸೈನಿಕರು ಕನ್ನಡ ಭಾಷಾ, ಮೌಖಿಕ ಪರೀಕ್ಷೆಯಲ್ಲಿ ಮಾತ್ರ ತೇರ್ಗಡೆಯಾಗತಕ್ಕದ್ದು. ವೇತನ ಮುಂಬಡ್ತಿ ಪಡೆಯುವ ಮತ್ತು ಸೇವಾ ಸ್ಥಿರೀಕರಣದ ಉದ್ದೇಶಗಳಿಗೆ ಕನ್ನಡ ಭಾಷಾ ಲಿಖಿತ ಪರೀಕ್ಷೆಯ ಬದಲಾಗಿ ಗರಿಷ್ಠ 50 ಅಂಕಗಳನ್ನು ನಿಗದಿಪಡಿಸಿರುವ ಕನ್ನಡ ಮೌಖಿಕ ಪರೀಕ್ಷೆಯಲ್ಲಿ ಮಾತ್ರ ಅವರು ತೇರ್ಗಡೆ ಹೊಂದಬೇಕಾಗಿರುತ್ತದೆ.

3) ಸರ್ಕಾರಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 3 ಎಸ್‌ಎಸ್‌ಆರ್ 82, ದಿನಾಂಕ 30ನೇ ಆಗಸ್ಟ್ 1982ರ ಮೇರೆಗೆ ಅಂಧರಾಗಿರುವ ಮತ್ತು ಕೆಲಸಕ್ಕೆ ಓದುವುದು ಮತ್ತು ಬರೆಯುವುದು ಅವಶ್ಯವಿಲ್ಲದ ಸರ್ಕಾರಿ ನೌಕರರಿಗೆ ಸ್ಥಿರೀಕರಣದ ಮತ್ತು ವಾರ್ಷಿಕ ವೇತನ ಮುಂಬಡ್ತಿಗಳನ್ನು ಪಡೆಯುವ ಉದ್ದೇಶಗಳಿಗಾಗಿ ಕನ್ನಡ ಭಾಷಾ ಲಿಖಿತ ಸೇವಾ ಪರೀಕ್ಷೆಯಲ್ಲಿ ತೇರ್ಗಡೆಯಾಗುವುದರಿಂದ ವಿನಾಯಿತಿಸಲಾಗಿದೆ. ಆದರೆ ಅವರು ಕನ್ನಡ ಭಾಷಾ ಮೌಖಿಕ ಪರೀಕ್ಷೆಯಲ್ಲಿ ತೇರ್ಗಡೆಯಾಗತಕ್ಕದ್ದು.

**12**. ಆಯೋಗದ ಆದೇಶ ಸಂಖ್ಯೆ ಇ.ಪ(2) 3774/94–95/ಪಿಎಸ್‌ಸಿ ದಿನಾಂಕ 18ನೇ ಫೆಬ್ರವರಿ 1995ರ ಮೇರೆಗೆ ಬ್ಯಾಟರಿ ಚಾಲಿತ ಪ್ರೋಗ್ರಾಮ್ ಮಾಡದೆ ಇರುವಂತಹ ಕ್ಯಾಲುಕ್ಯು ಲೇಟರ್‌ಗಳನ್ನು ಎಸ್.ಎ.ಎಸ್ ಪರೀಕ್ಷೆಗಳಲ್ಲಿ ಉಪಯೋಗಿಸಲು ಅಭ್ಯರ್ಥಿಗಳಿಗೆ ಅನುಮತಿ ನೀಡಲಾಗಿದೆ.

**13**. **ತೇರ್ಗಡೆ ಪ್ರಮಾಣ ಪತ್ರಗಳು**: ಪ್ರತಿಯೊಂದು ವಿಷಯಕ್ಕೆ ತೇರ್ಗಡೆ ಪ್ರಮಾಣಪತ್ರವನ್ನು ಆಯೋಗದಿಂದ ಫಲಿತಾಂಶವು ಅಧಿಕೃತವಾಗಿ ರಾಜ್ಯಪತ್ರದಲ್ಲಿ ಪ್ರಕಟವಾದ ನಂತರ ದೃಢೀಕೃತ ಅಂಚೆಯ ಮೂಲಕ ಕಳುಹಿಸಲಾಗುವುದು. ಪ್ರಮಾಣ ಪತ್ರದಲ್ಲಿ ಮುದ್ರಿತವಾದ ಹೆಸರು ಅಥವಾ ಇನ್ನಾವುದೇ ರೀತಿಯ ತಪ್ಪುಗಳು ಕಂಡುಬಂದಲ್ಲಿ ಅಭ್ಯರ್ಥಿಗಳು ಕೂಡಲೇ ತಿದ್ದುಪಡಿಗಾಗಿ ಸೂಕ್ತ ದಾಖಲೆಗಳೊಂದಿಗೆ ಆಯೋಗದ ಕಛೇರಿಯನ್ನು ಸಂಪರ್ಕಿಸುವುದು.

(ಸೂಚನೆ: ಪರೀಕ್ಷೆಯ ಪ್ರತಿಭಾಗವನ್ನು ಈ ಉದ್ದೇಶಕ್ಕೆ ಒಂದು ಪ್ರತ್ಯೇಕ ಪರೀಕ್ಷೆ ಎಂದು ಪರಿಗಣಿಸಲಾಗುವುದು)

**ಅಂಕಪಟ್ಟಿಗಳು:** ಇಲಾಖಾ ಪರೀಕ್ಷೆಯ ಎಲ್ಲಾ ಅಭ್ಯರ್ಥಿಗಳ ಅಂಕಗಳನ್ನು ಆಯೋಗದ ವೆಬ್ ಸೈಟ್ **"http://kpsc.kar.nic.in``** ನಲ್ಲಿ ಫಲಿತಾಂಶ ಪ್ರಕಟವಾದ ದಿನಾಂಕದಂದೇ ಪ್ರಕಟಿಸಲಾಗುವುದು ಪ್ರತ್ಯೇಕವಾಗಿ ಅಂಕಪಟ್ಟಿಗಳನ್ನು ನೀಡಲಾಗುವುದಿಲ್ಲ.

**14**. **ಅಂಕಗಳ ಮರು ಎಣಿಕೆ:**

ಎ) ಯಾವುದೇ ಪರೀಕ್ಷೆಯಲ್ಲಿ ಅನುತ್ತೀರ್ಣನಾದ ಅಭ್ಯರ್ಥಿಯು ಫಲಿತಾಂಶ ಪ್ರಕಟವಾದ ದಿನಾಂಕದಿಂದ 30 ದಿನಗಳೊಳಗಾಗಿ ಸದರಿ ಪರೀಕ್ಷೆಯ ಎಲ್ಲಾ ಪತ್ರಿಕೆಗಳ ಅಥವಾ ಯಾವುದೇ ಪತ್ರಿಕೆಯ ಅಂಕಗಳ ಮರು ಎಣಿಕೆಗಾಗಿ ಆಯೋಗಕ್ಕೆ ಅರ್ಜಿ ಸಲ್ಲಿಸಬಹುದು, ಅಂತಹ ಅರ್ಜಿ ಸಲ್ಲಿಸುವ ಪ್ರತಿಯೊಬ್ಬ ಅಭ್ಯರ್ಥಿಯು ಶೇವಣಿಯಾಗಿ ಪ್ರತಿ ಪತ್ರಿಕೆಗೆ 50–00 ರೂ.ಗಳನ್ನು ಕಾರ್ಯದರ್ಶಿ ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು ಇವರಿಗೆ ಸಂದಾಯವಾಗುವಂತೆ ಪಡೆದ ಡಿಡಿ ಮೂಲಕ ಸಂದಾಯ ಮಾಡತಕ್ಕದ್ದು ಮತ್ತು ಅಂತಹ ಮೊತ್ತವನ್ನು ಸಂದಾಯ ಮಾಡಿದ ಪುರಾವೆಯನ್ನು ತನ್ನ ಹೆಸರು, ನೋಂದಣಿ ಸಂಖ್ಯೆ ಮತ್ತು ಮರು ಎಣಿಕೆ ಮಾಡಬೇಕಾದ ವಿಷಯದ ವಿವರಗಳನ್ನು ಅರ್ಜಿಯೊಂದಿಗೆ ಒದಗಿಸತಕ್ಕದ್ದು.

ಬಿ) ಅಭ್ಯರ್ಥಿಯು ಪಡೆದ ಅಂಕಗಳ ಮರು ಎಣಿಕೆಯ ಸಂಬಂಧದಲ್ಲಿ ಆಯೋಗದ ನಿರ್ಣಯವೇ ಅಂತಿಮವಾಗಿರುತ್ತದೆ.

**15**. **ದುರ್ವರ್ತನೆ:** ಯಾವುದೇ ಒಬ್ಬ ಅಭ್ಯರ್ಥಿಯು ಸೇವಾ ಪರೀಕ್ಷೆಗಳಿಗೆ ಸಂಬಂಧಪಟ್ಟಂತೆ ಕೃತ್ರಿಮ ದಸ್ತಾವೇಜನ್ನು ಅಥವಾ ಅಕ್ರಮವಾಗಿ ತಿದ್ದಿದ ದಸ್ತಾವೇಜುಗಳನ್ನು ಸಲ್ಲಿಸಿದ ಅಥವಾ ಸರಿಯಲ್ಲದ ಅಥವಾ ಸುಳ್ಳು ವಿವರಣೆಯನ್ನು ನೀಡಿದ ಅಥವಾ ವಾಸ್ತವಿಕ ಮಾಹಿತಿಯನ್ನು ಮರೆಮಾಚಿದ ಅಥವಾ ಪರೀಕ್ಷೆಯಲ್ಲಿ ಅಕ್ರಮ ವಿಧಾನವನ್ನು ಅನುಸರಿಸಲು ಪ್ರಯತ್ನಿಸಿದ ಅಥವಾ ಬೇರೆ ರೀತಿಯಲ್ಲಿ ಇತರೆ ಯಾವುದೇ ಅಕ್ರಮ ಅನುಚಿತ ಮಾರ್ಗವನ್ನನುಸರಿಸಿದ ಅಪರಾಧವನ್ನು ಮಾಡಿರುವುದಾಗಿ ಆಯೋಗಕ್ಕೆ ಕಂಡುಬಂದಲ್ಲಿ, ಅಂತಹ ಅಭ್ಯರ್ಥಿಯನ್ನು ಕ್ರಿಮಿನಲ್ ವ್ಯವಹರಣೆಗೆ ಗುರಿಪಡಿಸುವುದಲ್ಲದೆ (ಎ) ಅಭ್ಯರ್ಥಿಯ ಆಯ್ಕೆಗಾಗಿ ಆಯೋಗದಿಂದ ನಡೆಸಲಾಗುವ ಯಾವುದೇ ಪರೀಕ್ಷೆಗೆ ಪ್ರವೇಶ ನೀಡುವುದಕ್ಕೆ ಅಥವಾ ಯಾವುದೇ ಸಂದರ್ಶನಕ್ಕೆ ಹಾಜರಾಗುವುದಕ್ಕೆ ಖಾಯಂ ಆಗಿ ಅಥವಾ ಒಂದು ನಿರ್ದಿಷ್ಟ ಅವಧಿಗೆ ಅನರ್ಹಗೊಳಿಸಲಾಗುವುದು ಮತ್ತು (ಬಿ) ಶಿಸ್ತಿನ ಕ್ರಮಕ್ಕೆ ಒಳಪಡಿಸಲಾಗುವುದು.

ಪರೀಕ್ಷಾ ಕೇಂದ್ರದಲ್ಲಿ ಮೇಲ್ವಿಚಾರಕರು ನೀಡುವ ಸೂಚನೆಗಳನ್ನು ತಪ್ಪದೇ ಪಾಲಿಸದಿದ್ದಲ್ಲಿ, ಅದನ್ನು ದುರ್ವರ್ತನೆಯನ್ನಾಗಿ ಪರಿಗಣಿಸಲಾಗುವುದು ಮತ್ತು ಆ ಕುರಿತು ಶಿಸ್ತಿನ ಕಾರ್ಯವಿಧಾನ–ಗಳಿಗೆ ಒಳಪಡಿಸಲಾಗುವುದು.

**16**. ಸರ್ಕಾರಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 76, ದಿನಾಂಕ 10ನೇ ಜನವರಿ 1987ರ ಅನುಸಾರವಾಗಿ ಸರ್ಕಾರಿ ಆದೇಶ ಸಂಖ್ಯೆ 649 ಇಎನ್ ಟಿ 57, ದಿನಾಂಕ 23ನೇ/25ನೇ ಫೆಬ್ರವರಿ 1959ರ ಅನುಸಾರವಾಗಿ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯಿಂದ ನಡೆಸಲಾದ ಅರಣ್ಯ ಇಲಾಖಾ ಪರೀಕ್ಷೆಯಲ್ಲಿ ತೇರ್ಗಡೆಯಾದ ಅಭ್ಯರ್ಥಿಗಳಿಗೆ ಅರಣ್ಯ ಪರೀಕ್ಷೆಯ ಪತ್ರಿಕೆ–2 ರಲ್ಲಿ ತೇರ್ಗಡೆಯಾಗು ವುದರಿಂದ ವಿನಾಯಿತಿ ನೀಡಲಾಗಿದೆ.

**17**. ಸರ್ಕಾರಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 69 ಎಸ್ಎಸ್ಆರ್ 76, ದಿನಾಂಕ 16ನೇ ಜುಲೈ 1977ರ ಅನುಸಾರವಾಗಿ ನವದೆಹಲಿಯ ಕರ್ನಾಟಕ ಭವನದಲ್ಲಿ ಕೆಲಸ ಮಾಡುತ್ತಿರುವ ಕರ್ನಾಟಕ ರಾಜ್ಯ ಸರ್ಕಾರಿ ನೌಕರರಿಗೆ ಇಲಾಖಾ ಪರೀಕ್ಷೆಗಳನ್ನು ಆಯೋಗದಿಂದ ಉಪನಿವಾಸ ಆಯುಕ್ತರು, ಕರ್ನಾಟಕ ಭವನದ ನಿವಾಸ ಆಯುಕ್ತರ ಕಛೇರಿ, ನವದೆಹಲಿ ಇವರ ನಿಯಂತ್ರಣದಲ್ಲಿ ನಡೆಸಲಾಗುವುದು.

**18**. ಸರ್ಕಾರಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 3 ಎಸ್ಎಸ್ಸಿ 83, ದಿನಾಂಕ 12ನೇ ಅಕ್ಟೋಬರ್ 1983 ಇದರ ಅನುಸಾರವಾಗಿ ಮುಸ್ಸೂರಿಯಲ್ಲಿ ತರಬೇತಿ ಪಡೆಯುತ್ತಿರುವ ಕರ್ನಾಟಕ ರಾಜ್ಯದ ಐ.ಎ.ಎಸ್, ಐ.ಪಿ.ಎಸ್, ಮತ್ತು ಐ.ಎಫ್.ಎಸ್ ಪ್ರೊಬೇಷನರುಗಳಿಗೆ ಇಲಾಖಾ ಪರೀಕ್ಷೆ ಗಳನ್ನು **ಆಯೋಗವು** ಪರೀಕ್ಷೆಗಳ ನಿಯಂತ್ರಣಾಧಿಕಾರಿ, ಲಾಲ್‌ಬಹದ್ದೂರ್ ಶಾಸ್ತ್ರಿ ರಾಷ್ಟ್ರೀಯ ಪ್ರಶಾಸನ ಅಕಾಡೆಮಿ, ಮುಸ್ಸೂರಿ, ಇವರ ನಿಯಂತ್ರಣದಲ್ಲಿ ನಡೆಸಲಾಗುವುದು.

**19**. ಸರ್ಕಾರಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 19 ಎಸ್ಎಸ್ಸಿ 75, ದಿನಾಂಕ 5ನೇ ಜುಲೈ 1978ರ ಅನುಸಾರವಾಗಿ ಅಂಧರಾಗಿರುವ ಅಥವಾ ತನ್ನ ಸ್ವಂತ ಕೈಯಿಂದ ಬರೆಯಲು ಅಸಮರ್ಥರಾದ ಅಭ್ಯರ್ಥಿಗಳಿಗೆ ಈ ಮುಂದಿನ ಷರತ್ತುಗಳಿಗೊಳಪಟ್ಟು ಒಬ್ಬ ಅನುಲೇಖಕನ ಸಹಾಯವನ್ನು ಪಡೆಯುವುದಕ್ಕೆ ಅನುಮತಿಸಲಾಗಿದೆ:

1. ಅನುಲೇಖಕನ ಸಹಾಯವನ್ನು ಬಯಸುವ ಅಭ್ಯರ್ಥಿಯು ಅವನು ಅರ್ಜಿಯನ್ನು ಸರ್ಕಾರಿ ಆಸ್ಪತ್ರೆಯ ವೈದ್ಯರಿಂದ ನೀಡಲಾದ ಒಂದು ಪ್ರಮಾಣ ಪತ್ರದೊಂದಿಗೆ ಅವನ ಮೇಲಧಿಕಾರಿಯ ಮೂಲಕ ಕಳುಹಿಸತಕ್ಕದ್ದು.
2. ಮೇಲಧಿಕಾರಿಯು ಅರ್ಜಿಯನ್ನು ಆಯೋಗಕ್ಕೆ ಕಳುಹಿಸುವ ಮೊದಲು ಅಭ್ಯರ್ಥಿಯು ನಿಜವಾಗಿ ಅಸಮರ್ಥನಾಗಿರುವನೆ ಮತ್ತು ಅವನಿಗೆ ಅನುಲೇಖಕನ ಸಹಾಯ ಅವಶ್ಯವಾಗಿದೆಯೇ ಎಂಬುದನ್ನು ಖಚಿತಪಡಿಸಿಕೊಳ್ಳತಕ್ಕದ್ದು.
3. ಒಬ್ಬ ಅನುಲೇಖಕನ ಸಹಾಯಕ್ಕೆ ಮಂಜೂರಾತಿ ನೀಡಿದಾಗ ಸಂಬಂಧಪಟ್ಟ ಕೇಂದ್ರದ ಮೇಲ್ವಿಚಾರಕರು ಅಭ್ಯರ್ಥಿಗೆ ಒಬ್ಬ ಅನುಲೇಖಕನನ್ನು ನೇಮಕ ಮಾಡತಕ್ಕದ್ದು ಮತ್ತು ಅದನ್ನು ಕಾರ್ಯದರ್ಶಿ ಮತ್ತು ಇಲಾಖಾ ಪರೀಕ್ಷೆಯ ನಿಯಂತ್ರಣಾಧಿಕಾರಿಗೆ ತಿಳಿಸತಕ್ಕದ್ದು.
4. ಹಾಗೆ ನೇಮಕ ಮಾಡಲಾದ ಅನುಲೇಖಕನು ಅಭ್ಯರ್ಥಿಗಿಂತ ಕೆಳಗಿನ ದರ್ಜೆಯವನು ಅಥವಾ ಕಡಿಮೆ ಶಿಕ್ಷಣ ಪಡೆದವನು ಆಗಿರತಕ್ಕದ್ದು ಮತ್ತು ಅವನು ಅಭ್ಯರ್ಥಿಯ ಸಂಬಂಧಿಕನಾಗಿರಬಾರದು.
5. ಅಭ್ಯರ್ಥಿಗಳು ಪರೀಕ್ಷೆಯ ಪ್ರತಿಯೊಂದು ಪತ್ರಿಕೆಗೆ ರೂ. 5/–(ಐದು ರೂಪಾಯಿಗಳು) ಮೊತ್ತವನ್ನು ಮುಂಗಡವಾಗಿ ಸಂದಾಯ ಮಾಡತಕ್ಕದ್ದು ಮತ್ತು ಸದರಿ ಮೊತ್ತವನ್ನು ಪರೀಕ್ಷೆಯ ಪತ್ರಿಕೆ ಮುಗಿದ ಕೂಡಲೇ ಅನುಲೇಖಕನಿಗೆ ಸಂದಾಯ ಮಾಡತಕ್ಕದ್ದು.
6. ಒಬ್ಬ ಅನುಲೇಖಕನನ್ನು ನೇಮಕ ಮಾಡಲಾಗಿದ್ದರೆ ಅಭ್ಯರ್ಥಿಗೆ ಹದಿನೈದು ನಿಮಿಷಗಳ ಹೆಚ್ಚಿನ ಕಾಲಾವಕಾಶವನ್ನು ನೀಡಲಾಗುವುದು.
7. ಅನುಲೇಖಕನ ಸಹಾಯ ಬಯಸುವ ಅಭ್ಯರ್ಥಿಗಳು ಅವಶ್ಯಕ ವೈದ್ಯಕೀಯ ಪ್ರಮಾಣ ಪತ್ರ ಮತ್ತು ಮೇಲಧಿಕಾರಿಗಳ ದೃಢೀಕರಣವನ್ನು ತಮ್ಮ ಅರ್ಜಿಯ ಜೊತೆಯಲ್ಲಿಯೇ ಲಗತ್ತಿಸಿ ಕಳುಹಿಸತಕ್ಕದ್ದು. ಅರ್ಜಿಯೊಂದಿಗೆ ಸಲ್ಲಿಸದಂತಹ ಕೋರಿಕೆಯನ್ನು ಅನಿವಾರ್ಯ ಹಾಗೂ ಸಕಾರಣವಿಲ್ಲದ ಹೊರತು ಇತರ ಯಾವುದೇ ಸಂದರ್ಭಗಳಲ್ಲೂ ನಿಗದಿಪಡಿಸಲಾದ ಕಡೆಯ ದಿನಾಂಕದ ನಂತರ ಪರಿಗಣಿಸಲಾಗುವುದಿಲ್ಲ.
8. ಅಭ್ಯರ್ಥಿಗಳು ಅನುಲೇಖಕನ ಸಹಾಯ ಕೋರಿ ಸಲ್ಲಿಸುವ ವೈದ್ಯಕೀಯ ಪ್ರಮಾಣ ಪತ್ರವನ್ನು ಅನುಮಾನಸ್ಪದ ಸಂದರ್ಭದಲ್ಲಿ ಮಾತ್ರ ವೈದ್ಯಕೀಯ ಮಂಡಳಿಗೆ ಪರಿಶೀಲನೆಗಾಗಿ ಕಳುಹಿಸಲಾಗುವುದು. ಹಾಗೂ ಕೆಲವೊಂದು ಸಂದರ್ಭಗಳಲ್ಲಿ ಅವಶ್ಯಕವೆನಿಸಿದರೆ ಅಂತಹವರನ್ನು ವೈದ್ಯಕೀಯ ಪರಿಶೀಲನೆಗೂಗುರಿಪಡಿಸಲಾಗುವುದು. ಸುಳ್ಳು ಪ್ರಮಾಣ ಪತ್ರ ಹಾಜರುಪಡಿಸಿದ್ದು ಅದು ಸಾಬೀತಾದ ಸಂದರ್ಭಗಳಲ್ಲಿ ಅಂತಹ ಅಭ್ಯರ್ಥಿಗಳ ಮೇಲೆ ನಿಯಮಾನುಸಾರ ಶಿಸ್ತಿನ ಕ್ರಮ ಜರುಗಿಸಲಾಗುವುದಲ್ಲದೆ ಅಂತಹವರ ಇಲಾಖಾ ಪರೀಕ್ಷೆಯ ಅಭ್ಯರ್ಥಿತ್ವವನ್ನು ರದ್ದುಪಡಿಸಲಾಗುವುದು.

**20**. ಸರ್ಕಾರಿ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 24 ಎಸ್ಎಸ್ಆರ್ 2006 ದಿನಾಂಕ:15–11–2006ರಲ್ಲಿ "ಸೆಕ್ರೇಟೇರಿಯಟ್ ಮ್ಯಾನ್ಯುಯಲ್ ಭಾಗ–I ಮತ್ತು ಭಾಗ– II " ವಿಷಯದ ಪಠ್ಯ ಕ್ರಮಕ್ಕೆ ಮಾಡಲಾದ ತಿದ್ದುಪಡಿ ಈ ಕೆಳಕಂಡಂತಿದೆ:–

**PAPER – 1**

**MARKS: 100**
**TIME: 2 HOURS**

(1) In the heading `` Secretariat Manual Examination Part-I``, at serial number 32,
(a) for the entries under the sub-heading ``Paper-1``, the following shall be substituted namely:-
"Karnataka Government Secretariat Manual of Office Procedure (Revised) 2005 and connected orders."

**PAPER –II**

**MARKS: 100**
**TIME: 2 HOURS**

(b) in the entries under the sub-heading "Paper-II", for item 4 and 5 and entries relating thereto, the following shall be substituted, namely:-
"(4) Karnataka Civil Services (General Recruitment) Rules, 1977;)
(5) Karnataka Public Service Commission (Consultation) Regulations, 2000"

**SECRETARIAT MANUAL PART-II**

**MARKS: 100**
**TIME: 2 HOURS**

(2) under the heading "Secretariat Manual Examination Part-II", for item (ii) and the entries relating thereto, the following items shall be substituted, namely:-
"(ii) The Karnataka Government (Transaction of Business) Rules, 1977
(iii) The Karnataka Government (Allocation of Business) Rules, 1977"

**21.** ಸರ್ಕಾರಿ ಅಧಿಸೂಚನೆ ಸಂಖ್ಯೆ:ಡಿಪಿಎಆರ್ 35 ಎಸ್‌ಎಸ್‌ಆರ್ 2004 ದಿನಾಂಕ: 28–08–2006 ರ ಆದೇಶದಲ್ಲಿ "ಎಲೆಕ್ಟ್ರಿಸಿಟಿ (ಆಡಿಟ್ ಆಂಡ್ ಅಕೌಂಟ್ಸ್) ಲಾಸ್ (ಹೈಯರ್) ಎಕ್ಸಾಮಿನೇಷನ್ ಭಾಗ– **I** " ಕೆಳಕಂಡ ಪಠ್ಯ ಕ್ರಮವನ್ನು ಬದಲಾಯಿಸಿದೆ.

**ELECTRICITY (AUDIT AND ACCOUNTS) LAWS (HIGHER) EXAMINATION PART-I**

**MARKS: 100**
**TIME: 2 HOURS**

(1) In the sub-heading "Electricity Laws Examination Paper-1",at Sl.No.50,-
(a) for item (1) and the entries relating thereto, the following shall be substituted, namely:-
(b) for item (3)and the entries relating thereto, the following shall be substituted, namely:-
"(3) The Karnataka Electricity Reforms Act, 1999 and the rules framed thereunder",

(2) In the entries under the sub-heading "Electricity (Audit and Accounts) Laws (Higher) Examination, Part I" at Sl.No. 51,for item (1) and the entries relating thereto, the following shall be subtituted, namely:-
"(1) The Electricity Act, 2003 (Central Act 36 of 2003) and the rules made thereunder".

ಪ್ರಶ್ನೆ ಪತ್ರಿಕೆಯು 2 ಗಂಟೆಗಳ ಅವಧಿಯಾಗಿದ್ದು 100 ಅಂಕಗಳನ್ನು ಒಳಗೊಂಡಿರುತ್ತದೆ.

**22. ಐಎಎಸ್, ಐಪಿಎಸ್ ಮತ್ತು ಐಎಫ್‌ಎಸ್ ಪ್ರೊಬೇಷನರ್ಸ್‌ಗಳಿಗೆ/ಅಧಿಕಾರಿಗಳಿಗೆ ಕನ್ನಡಭಾಷಾ ವಿಷಯದ ಇಲಾಖಾ ಪರೀಕ್ಷೆ ಅಭ್ಯರ್ಥಿಗಳಿಗೆ ಸರ್ಕಾರವು ತನ್ನ ಆದೇಶ ಸಂಖ್ಯೆ:ಡಿಪಿಎಆರ್ 168 ಎಸ್‌ಎಂಇ 94, ದಿನಾಂಕ: 12–07–1995ರಲ್ಲಿ ನಿಗದಿಪಡಿಸಲಾಗಿದ್ದ ಕನ್ನಡ ಪತ್ರಿಕೆ–1ರಲ್ಲಿ 10ನೇ ತರಗತಿಯ ಪಠ್ಯಪುಸ್ತಕ "ಸಾಹಿತ್ಯ ಮಂಜರಿ–3" ಪುಸ್ತಕದ ಬದಲಾಗಿ 10ನೇ ತರಗತಿಯ ಕನ್ನಡ ದ್ವಿತೀಯ ಹಾಗೂ ತೃತೀಯ ಭಾಷಾಪುಸ್ತಕ "ತಿಳಿಗನ್ನಡ–6" ಎಂಬ ಪುಸ್ತಕವನ್ನು ನಿಗದಿ ಪಡಿಸಲಾಗಿದೆ.**

**23.** ಅರ್ಜಿಗಳನ್ನು "ಕಾರ್ಯದರ್ಶಿ ಮತ್ತು ನಿಯಂತ್ರಕರು, ಇಲಾಖಾ ಪರೀಕ್ಷೆಗಳು, ಕರ್ನಾಟಕ ಲೋಕ ಸೇವಾ ಆಯೋಗ, ಉದ್ಯೋಗ ಸೌಧ,ಬೆಂಗಳೂರು–560001," ಇವರಿಗೆ ದಿನಾಂಕ **06–12–2008** ರಂದು ಸಾಯಂಕಾಲ 5–00 ಗಂಟೆಯೊಳಗೆ ತಲುಪಿಸತಕ್ಕದ್ದು. ಕಡೇ ದಿನಾಂಕದ ತರುವಾಯ ಸ್ವೀಕರಿಸಲಾದ ಅರ್ಜಿಗಳನ್ನು ತಿರಸ್ಕರಿಸಲಾಗುವುದು. ಮೇಲಧಿಕಾರಿಯ ಮೂಲಕ ಅಥವಾ ಅಂಚೆಯಲ್ಲಿ ಅರ್ಜಿಗಳನ್ನು ರವಾನಿಸುವಾಗ ಅದು ಯಾವುದೇ ಕಾರಣದಿಂದ ವಿಳಂಬವಾಗಿ ಅಂದರೆ ನಿಗದಿ ಪಡಿಸಲಾದ ಕೊನೆಯ ದಿನಾಂಕದ ನಂತರ ಆಯೋಗಕ್ಕೆ ತಲುಪಿದಲ್ಲಿ ಅಂತಹ ವಿಳಂಬ ಅರ್ಜಿಗಳನ್ನು ಪುರಸ್ಕರಿಸುವುದಕ್ಕೆ ಸಮಂಜಸವಾದ ಕಾರಣಗಳಿಲ್ಲದಲ್ಲಿ ಪರಿಗಣಿಸಲಾಗುವುದಿಲ್ಲ.

**24**. ಮೇಲಿನ ಅಧಿಸೂಚನೆಗೆ ಅನುಗುಣವಾಗಿಲ್ಲದ, ನಿಗದಿತ ಸ್ಥಳದಲ್ಲಿ ಮತ್ತು ಹಾಜರಾತಿ ಹಾಳೆಯಲ್ಲಿ ಅಭ್ಯರ್ಥಿಯ ಸಹಿ ಇಲ್ಲದಂತಹ, ಸಂಬಂಧಿತ ಮೇಲಧಿಕಾರಿಗಳಿಂದ ಅಭ್ಯರ್ಥಿಯ ಭಾವಚಿತ್ರಗಳನ್ನು ದೃಢೀಕರಿಸದಂತಹ ಹಾಗೂ ಮೇಲಧಿಕಾರಿಯ ಸಹಿ ಹಾಗೂ ಮೊಹರುಗಳನ್ನೊಳಗೊಂಡಿಲ್ಲದಂತಹ ಅರ್ಜಿಗಳನ್ನು ಯಾವುದೇ ಸೂಚನೆ ನೀಡದೆ ತಿರಸ್ಕರಿಸಲಾಗುವುದು.

**25**. ನಕಲು ಪ್ರಮಾಣಪತ್ರ ಪಡೆಯ ಬಯಸುವ ಅಭ್ಯರ್ಥಿಗಳು ತಮ್ಮ ಅರ್ಜಿಯೊಂದಿಗೆ ಪ್ರಮಾಣಪತ್ರವು ಲಭ್ಯವಿಲ್ಲದ ಬಗ್ಗೆ ನೋಟರಿಯವರ ಮುಂದೆ ಪ್ರಮಾಣಮಾಡಿರುವ "ಅಫಿಡವಿಟ್" ಹಾಗೂ ಎಸ್.ಎಸ್.ಎಲ್.ಸಿ ಅಂಕಪಟ್ಟಿ (ಹುಟ್ಟಿದ ದಿನಾಂಕ, ತಂದೆಯ ಹೆಸರು ಒಳಗೊಂಡಂತೆ) ಅಥವಾ ಸೇವಾ ಪುಸ್ತಕದ ಭಾಗ–1ರ ಉದ್ಧೃತಭಾಗವನ್ನು ದೃಢಿಕರಿಸಿ ಲಗತ್ತಿಸಬೇಕು ಹಾಗೂ ಯಾವುದೆ ಅವಧಿಯ ಇಲಾಖೆ ಪರೀಕ್ಷೆಯ ಪ್ರತಿಯೊಂದು ವಿಷಯದ ಪ್ರತ್ಯೇಕ ಪ್ರಮಾಣಪತ್ರಕ್ಕೆ 50–00ರೂ. ಗಳ ಶುಲ್ಕವನ್ನು ಕಾರ್ಯದರ್ಶಿ, ಕರ್ನಾಟಕ ಲೋಕ ಸೇವಾ ಆಯೋಗ, ಬೆಂಗಳೂರು ಇವರಿಗೆ ಸಂದಾಯವಾಗುವಂತೆ ಪಡೆದ **ಬ್ಯಾಂಕ್ ಡಿ.ಡಿ. ಸಲ್ಲಿಸತಕ್ಕದ್ದು.**

**ಅಭ್ಯರ್ಥಿಗಳಿಗೆ ವಿಶೇಷ ಸೂಚನೆಗಳು:–**

1. ಸೇವಾ ಪರೀಕ್ಷೆಗಳಿಗೆ ಸಂಬಂಧಪಟ್ಟ ಎಲ್ಲಾ ಪತ್ರ ವ್ಯವಹಾರವನ್ನು ಕಾರ್ಯದರ್ಶಿ ಹಾಗೂ ನಿಯಂತ್ರಕರು, ಇಲಾಖಾ ಪರೀಕ್ಷೆಗಳು ಕರ್ನಾಟಕ ಲೋಕಸೇವಾ ಆಯೋಗ, ಉದ್ಯೋಗ ಸೌಧ, ಬೆಂಗಳೂರು–560001 ಈ ವಿಳಾಸಕ್ಕೆ ಮಾಡತಕ್ಕದ್ದು.
2. ಪರೀಕ್ಷೆಗಳ ಸಂಬಂಧದಲ್ಲಿ ಯಾವುದೇ ಮಾಹಿತಿ ಕೋರುವ ಅಭ್ಯರ್ಥಿಗಳು ಮನವಿಯಲ್ಲಿ ಎಲ್ಲಾ ಮಾಹಿತಿ ನೀಡಿ ಅದರೊಂದಿಗೆ ಸಾಕಷ್ಟು ಅಂಚೆ ಚೀಟಿಗಳನ್ನು ಹಚ್ಚಿದ ಸ್ವವಿಳಾಸ ಬರೆದ ಒಂದು ಲಕೋಟೆಯನ್ನು ಲಗತ್ತಿಸಿದರೆ ಆಯೋಗದ ಉತ್ತರವು ಅಡಚಣೆ ಆಗದೇ ಬೇಗ ತಲುಪುವುದು.
3. ಮಾಹಿತಿಗಾಗಿ ಅಭ್ಯರ್ಥಿಗಳು ಆಯೋಗಕ್ಕೆ ಸಲ್ಲಿಸುವ ಮನವಿ / ತಂತಿಗಳಲ್ಲಿ ನೋಂದಣಿ ಸಂಖ್ಯೆ, ಅಧಿವೇಶನ, ವಿಷಯ ಮತ್ತು ಪರೀಕ್ಷಾಕೇಂದ್ರ ಮುಂತಾದ ಸುಸಂಗತ ವಿವರಗಳನ್ನು ಸೂಚಿಸದಿದ್ದಲ್ಲಿ ಅಂತಹವುಗಳನ್ನು ಪುರಸ್ಕರಿಸಲಾಗುವುದಿಲ್ಲ.
4. ಅಭ್ಯರ್ಥಿಗಳು ಪೊಲೀಸ್ ಸಮವಸ್ತ್ರವನ್ನು ಧರಿಸಿ ಪರೀಕ್ಷೆ ಬರೆಯುವುದನ್ನು ನಿಷೇಧಿಸಲಾಗಿದೆ.
5. ಅಭ್ಯರ್ಥಿಗಳು ತಮ್ಮ ಸಹ ನೌಕರರನ್ನು/ಇತರರನ್ನು ಕರೆತರುವುದನ್ನು ಮತ್ತು ಪರೀಕ್ಷೆ ನಡೆಯುತ್ತಿರುವಾಗ ಅವರನ್ನು ನೋಡುವಂತೆ ಕೋರುವುದನ್ನು ನಿಷೇಧಿಸಲಾಗಿದೆ.

**ವಿ.ಬಿ.ಪಾಟೀಲ್**
ಕಾರ್ಯದರ್ಶಿ ಹಾಗೂ ನಿಯಂತ್ರಕರು,
ಇಲಾಖಾ ಪರೀಕ್ಷೆಗಳು,
ಕರ್ನಾಟಕ ಲೋಕಸೇವಾ ಆಯೋಗ.

**ಕರ್ನಾಟಕ ಲೋಕಸೇವಾ ಆಯೋಗ," ಉದ್ಯೋಗ ಸೌಧ", ಬೆಂಗಳೂರು–560001.**

**ಅಧಿಸೂಚನೆ ಸಂಖ್ಯೆ ಇ.ಪ.(1)1219/2008–2009/ಪಿಎಸ್‌ಸಿ ದಿನಾಂಕ: 30–10–2008ಕ್ಕೆ**

**ಅನುಬಂಧ " ಎ "**

**2008ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಗಳು**

**ಎಲ್ಲಾ ಜಿಲ್ಲಾ ಕೇಂದ್ರಗಳಲ್ಲಿ ನಡೆಯಲಿರುವ ಪರೀಕ್ಷೆಗಳ ವೇಳಾಪಟ್ಟಿ**

| ಕ್ರ. ಸಂ. | ವಾರ | ದಿನಾಂಕ | ವೇಳೆ | ವಿಷಯ |
|---|---|---|---|---|
| 1 | 2 | 3 | 4 | 5 |
| 1. | ಸೋಮವಾರ | 02–02–2009 | ಬೆಳಿಗ್ಗೆ 10.00 ರಿಂದ 12–00 ಗಂಟೆ<br>ಮಧ್ಯಾಹ್ನ 2.00 ರಿಂದ ಸಂಜೆ 4.00 ಗಂಟೆ | ಅಕೌಂಟ್ಸ್ ಲೋಯರ್<br>ಜನರಲ್ ಲಾ ಭಾಗ–2 |
| 2 | ಮಂಗಳವಾರ | 03–02–2009 | ಬೆಳಿಗ್ಗೆ 10.00 ರಿಂದ 12.00 ಗಂಟೆ<br>ಮಧ್ಯಾಹ್ನ 2.00 ರಿಂದ ಸಂಜೆ 4.00 ಗಂಟೆ | ಜನರಲ್ ಲಾ ಭಾಗ–1 ಪತ್ರಿಕೆ–1<br>ಜನರಲ್ ಲಾ ಭಾಗ–1 ಪತ್ರಿಕೆ–2 |
| 3. | ಬುಧವಾರ | 04–02–2009 | ಬೆಳಿಗ್ಗೆ 10.00 ರಿಂದ 12.00 ಗಂಟೆ<br>ಮಧ್ಯಾಹ್ನ 2.00 ರಿಂದ ಸಂಜೆ 4.00 ಗಂಟೆ | ಅಕೌಂಟ್ಸ್ ಹೈಯರ್ ಪತ್ರಿಕೆ–1<br>ಅಕೌಂಟ್ಸ್ ಹೈಯರ್ ಪತ್ರಿಕೆ–2 |
| 4. | ಗುರುವಾರ | 05–02–2009 | ಬೆಳಿಗ್ಗೆ 10.00 ರಿಂದ 12.00 ಗಂಟೆ<br>ಮಧ್ಯಾಹ್ನ 2.00 ರಿಂದ ಸಂಜೆ 3.00 ಗಂಟೆ | ಕನ್ನಡ ಪತ್ರಿಕೆ–1 (ಪುಸ್ತಕಗಳಿಲ್ಲದೆ)<br>ಕನ್ನಡ ಪತ್ರಿಕೆ–2 (ಪುಸ್ತಕಗಳಿಲ್ಲದೆ) |
| 5. | ಶುಕ್ರವಾರ | 06–02–2009 | ಬೆಳಿಗ್ಗೆ 10.00 ರಿಂದ 1.00 ಗಂಟೆ<br><br>ಮೇಲಿನಂತೆ<br><br>ಮಧ್ಯಾಹ್ನ 2.00 ರಿಂದ ಸಂಜೆ 5.00 ಗಂಟೆ<br><br>ಮೇಲಿನಂತೆ | ಇನ್ಸೂರೆನ್ಸ್ ಹೈಯರ್ ಪತ್ರಿಕೆ–2 (ಪುಸ್ತಕಗಳಿಲ್ಲದೆ)<br>ಪಿ.ಡಬ್ಲ್ಯೂ.ಡಿ ಹೈಯರ್ ಭಾಗ–1 ಪತ್ರಿಕೆ–1, (ಪುಸ್ತಕಗಳಿಲ್ಲದೆ)<br>ಇನ್ಸೂರೆನ್ಸ್ ಲೋಯರ್ ಪತ್ರಿಕೆ–2 {ಪುಸ್ತಕಗಳಿಲ್ಲದೆ}<br>ಪ್ರೆಸ್ ಮ್ಯಾನ್ಯುಯಲ್ ಹೈಯರ್ ಪತ್ರಿಕೆ–2, |

| 1 | 2 | 3 | 4 | 5 |
|---|---|---|---|---|
| 6 | ಶನಿವಾರ | 07–02–2009 | ಬೆಳಿಗ್ಗೆ 10.00 ರಿಂದ 12.00 ಗಂಟೆ | ಲೇಬರ್ ಪತ್ರಿಕೆ–1 |
| | | | ಮೇಲಿನಂತೆ | ಪ್ರಿಸನ್ಸ್ |
| | | | ಮೇಲಿನಂತೆ | ಎಕ್ಸೈಸ್ |
| | | | ಮೇಲಿನಂತೆ | ಮೋಟಾರ್ ವೆಹಿಕಲ್ಸ್ |
| | | | ಮೇಲಿನಂತೆ | ರೆವಿನ್ಯೂ ಹೈಯರ್ ಭಾಗ–1 ಪತ್ರಿಕೆ–1 |
| | | | ಮೇಲಿನಂತೆ | ಇನ್ಸೂರೆನ್ಸ್ ಅಡ್ವಾನ್ಸಡ್ ಪತ್ರಿಕೆ–1 |
| | | | ಮಧ್ಯಾಹ್ನ 2.00 ರಿಂದ ಸಂಜೆ 4.00ಗಂಟೆ | ಲೇಬರ್ ಪತ್ರಿಕೆ–2 |
| | | | ಮೇಲಿನಂತೆ | ಇನ್ಸೂರೆನ್ಸ್ ಅಡ್ವಾನ್ಸಡ್ ಪತ್ರಿಕೆ–2 |
| | | | ಮೇಲಿನಂತೆ | ರೆವಿನ್ಯೂ ಹೈಯರ್ ಭಾಗ–1 ಪತ್ರಿಕೆ–2 |
| 7. | ಭಾನುವಾರ | 08–02–2009 | ಬೆಳಿಗ್ಗೆ 10.00 ರಿಂದ 12.00 ಗಂಟೆ | ರೆವಿನ್ಯೂ ಹೈಯರ್ ಭಾಗ–2 ಪತ್ರಿಕೆ–1 |
| | | | ಮೇಲಿನಂತೆ | ರಿಜಿಸ್ಟ್ರೇಷನ್ ಪತ್ರಿಕೆ–1 |
| | | | ಮೇಲಿನಂತೆ | ಕಮರ್ಷಿಯಲ್‌ಟ್ಯಾಕ್ಸ್ ಭಾಗ–1 ಪತ್ರಿಕೆ–1 |
| | | | ಮೇಲಿನಂತೆ | ಇನ್ಸೂರೆನ್ಸ್ ಅಡ್ವಾನ್ಸಡ್ ಪತ್ರಿಕೆ–3 |
| | | | ಮಧ್ಯಾಹ್ನ 2.00 ರಿಂದ ಸಂಜೆ 4.00 ಗಂಟೆ | ರೆವಿನ್ಯೂ ಹೈಯರ್ ಭಾಗ–2 ಪತ್ರಿಕೆ–2 |
| | | | ಮೇಲಿನಂತೆ | ರಿಜಿಸ್ಟ್ರೇಷನ್ ಪತ್ರಿಕೆ–2 |
| | | | ಮೇಲಿನಂತೆ | ಕಮರ್ಷಿಯಲ್‌ಟ್ಯಾಕ್ಸ್ ಭಾಗ–1,ಪತ್ರಿಕೆ–2 |
| | | | ಮೇಲಿನಂತೆ | ಇನ್ಸೂರೆನ್ಸ್ ಹೈಯರ್ ಪತ್ರಿಕೆ–1 |
| 8. | ಸೋಮವಾರ | 09–02–2009 | ಬೆಳಿಗ್ಗೆ 10.00 ರಿಂದ 12.00 ಗಂಟೆ | ಪೊಲೀಸ್ ಮ್ಯಾನ್ಯುಯಲ್ |
| | | | ಮೇಲಿನಂತೆ | ಕೋ–ಆಪರೇಷನ್ ಪತ್ರಿಕೆ–1 |
| | | | ಮೇಲಿನಂತೆ | ಎಂಪ್ಲಾಯ್‌ಮೆಂಟ್ ಎಕ್ಸ್‌ಚೇಂಜ್ ಪ್ರೊಸೀಜರ್ ಹೈಯರ್ |
| | | | ಮೇಲಿನಂತೆ | ಮಾರ್ಕೆಟಿಂಗ್ ಪತ್ರಿಕೆ–1 |
| | | | ಮೇಲಿನಂತೆ | ಮೈನಿಂಗ್ ಭಾಗ–1 |
| | | | ಮೇಲಿನಂತೆ | ರೆವಿನ್ಯೂ ಲೋಯರ್ ಪತ್ರಿಕೆ–1 |
| | | | ಮಧ್ಯಾಹ್ನ 2.00 ರಿಂದ ಸಂಜೆ 4.00 ಗಂಟೆ | ಕಮರ್ಷಿಯಲ್ ಟ್ಯಾಕ್ಸ್ ಭಾಗ–1 ಪತ್ರಿಕೆ–3 ಮತ್ತು ಕೋ–ಆಪರೇಷನ್ ಪತ್ರಿಕೆ–2 (ಎರಡಕ್ಕೂ ಒಂದೇ ಪ್ರಶ್ನೆ ಪತ್ರಿಕೆ) |
| | | | ಮೇಲಿನಂತೆ | ಇನ್ಸೂರೆನ್ಸ್ ಹೈಯರ್ ಪತ್ರಿಕೆ–3 |
| | | | ಮೇಲಿನಂತೆ | ಎಂಪ್ಲಾಯ್‌ಮೆಂಟ್ ಎಕ್ಸ್‌ಚೇಂಜ್ ಪ್ರೊಸೀಜರ್ ಲೋಯರ್ |
| | | | ಮೇಲಿನಂತೆ | ಮಾರ್ಕೆಟಿಂಗ್ ಪತ್ರಿಕೆ–2 |
| | | | ಮೇಲಿನಂತೆ | ಮೈನಿಂಗ್ ಭಾಗ–2 |
| | | | ಮೇಲಿನಂತೆ | ರೆವಿನ್ಯೂ ಲೋಯರ್ ಪತ್ರಿಕೆ–2 |
| 9. | ಮಂಗಳವಾರ | 10–02–2009 | ಬೆಳಿಗ್ಗೆ 10.00 ರಿಂದ 12.00 ಗಂಟೆ | ಸಿರಿಕಲ್ಚರ್ ಪತ್ರಿಕೆ–1 |
| | | | ಮೇಲಿನಂತೆ | ಕಮ್ಯೂನಿಟಿ ಡೆವಲಪ್‌ಮೆಂಟ್ ಭಾಗ–1 |
| | | | ಮೇಲಿನಂತೆ | ರೆವಿನ್ಯೂ ಲೋಯರ್ ಪತ್ರಿಕೆ–3 |
| | | | ಮೇಲಿನಂತೆ | ಕಮರ್ಷಿಯಲ್ ಟ್ಯಾಕ್ಸ್ ಭಾಗ–2 ಪತ್ರಿಕೆ–1 |
| | | | ಮೇಲಿನಂತೆ | ಪ್ರೆಸ್ ಮ್ಯಾನ್ಯುಯಲ್ ಹೈಯರ್ ಪತ್ರಿಕೆ–1 |
| | | | ಮೇಲಿನಂತೆ | ಲೋಕಲ್ ಲಾಸ್ ಅಂಡ್ ಕಮರ್ಷಿಯಲ್ ಬುಕ್ ಕೀಪಿಂಗ್ ಪತ್ರಿಕೆ–1 |
| | | | ಮೇಲಿನಂತೆ | ಪೋರ್ಟ್ಸ್ ಹೈಯರ್ |
| | | | ಮೇಲಿನಂತೆ | ಇನ್ಸೂರೆನ್ಸ್ ಲೋಯರ್ ಪತ್ರಿಕೆ–1 |
| | | | ಮೇಲಿನಂತೆ | ಯೂಥ್ ಸರ್ವೀಸಸ್ ಮ್ಯಾನ್ಯುಯಲ್ |
| | | | ಮಧ್ಯಾಹ್ನ 2.00ರ ರಿಂದ ಸಂಜೆ 4.00 ಗಂಟೆ | ಸಿರಿಕಲ್ಚರ್ ಪತ್ರಿಕೆ–2 |
| | | | ಮೇಲಿನಂತೆ | ಪಿ.ಡಬ್ಲ್ಯೂಡಿ ಹೈಯರ್ ಭಾಗ–1, ಪತ್ರಿಕೆ–2 |
| | | | ಮೇಲಿನಂತೆ | ಲೋಕಲ್ ಲಾಸ್ ಅಂಡ್ ಕಮರ್ಷಿಯಲ್ ಬುಕ್ ಕೀಪಿಂಗ್ ಪತ್ರಿಕೆ–2 |
| | | | ಮೇಲಿನಂತೆ | ಕಮ್ಯುನಿಟಿ ಡೆವಲಪ್‌ಮೆಂಟ್ ಭಾಗ–2 |
| | | | ಮೇಲಿನಂತೆ | ಕಮರ್ಷಿಯಲ್ ಟ್ಯಾಕ್ಸ್ ಭಾಗ–2 ಪತ್ರಿಕೆ–2 |
| | | | ಮೇಲಿನಂತೆ | ಪೋರ್ಟ್ಸ್ ಲೋಯರ್ |

| 1 | 2 | 3 | 4 | 5 |
|---|---|---|---|---|
| 10 | ಬುಧವಾರ | 11–02–2009 | ಬೆಳಿಗ್ಗೆ 10.00 ರಿಂದ 12.00 ಗಂಟೆ | ಫ್ಯಾಕ್ಟರೀಸ್ ಅಂಡ್ ಬಾಯ್ಲರ್ಸ್‌ಲಾಸ್ ಪತ್ರಿಕೆ–1 |
| | | | ಮೇಲಿನಂತೆ | ಇನ್ಶೂರೆನ್ಸ್ ಲೋಯರ್ ಪತ್ರಿಕೆ–3 |
| | | | ಮೇಲಿನಂತೆ | ಪಿ.ಡಬ್ಲ್ಯೂ.ಡಿ ಹೈಯರ್ ಭಾಗ–2 ಪತ್ರಿಕೆ–1 |
| | | | ಮೇಲಿನಂತೆ | ಪ್ರೆಸ್ ಮ್ಯಾನ್ಯುಯಲ್ ಲೋಯರ್ ಪತ್ರಿಕೆ–1 |
| | | | ಮೇಲಿನಂತೆ | ಆಕ್ಟ್ಸ್ ಅಂಡ್ ರೂಲ್ಸ್ ರಿಲೇಟಿಂಗ್ ಟು ವಿಮೆನ್ ಅಂಡ್ ಚೈಲ್ಡ್ ಡೆವೆಲಪ್‌ಮೆಂಟ್ |
| | | | ಮಧ್ಯಾಹ್ನ 2.00 ರಿಂದ ಸಂಜೆ 4.00 ಗಂಟೆ | ಫ್ಯಾಕ್ಟರೀಸ್ ಅಂಡ್ ಬಾಯ್ಲರ್ಸ್‌ಲಾಸ್ ಪತ್ರಿಕೆ–2 |
| | | | ಮೇಲಿನಂತೆ | ಪಿ.ಡಬ್ಲ್ಯೂ.ಡಿ ಹೈಯರ್ ಭಾಗ–2, ಪತ್ರಿಕೆ–2 |
| | | | ಮೇಲಿನಂತೆ | ಪ್ರೆಸ್‌ಮ್ಯಾನ್ಯುಯಲ್ ಲೋಯರ್ ಪತ್ರಿಕೆ–2 |
| | | | ಮೇಲಿನಂತೆ | ಕೋ–ಆಪರೇಟಿವ್ ಆಡಿಟ್ ಎಕ್ಸಾಮಿನೇಶನ್ ಪತ್ರಿಕೆ–1 |
| 11 | ಗುರುವಾರ | 12–02–2009 | ಬೆಳಿಗ್ಗೆ 10.00 ರಿಂದ 12.00 ಗಂಟೆ | ಪಿ.ಡಬ್ಲ್ಯೂ.ಡಿ. ಲೋಯರ್ ಪತ್ರಿಕೆ–1 |
| | | | ಮೇಲಿನಂತೆ | ಸೋಶಿಯಲ್ ವೆಲ್‌ಫೇರ್ ಅಂಡ್ ಬ್ಯಾಕ್ ವರ್ಡ್‌ಕ್ಲಾಸಸ್ ಮ್ಯಾನ್ಯುಯಲ್ ಅಂಡ್ ಕ್ಲಾಸಿಫಿಕೇಶನ್ ರಿಜರ್‌ವೇಶನ್ ಫಾರ್ ಬ್ಯಾಕ್‌ವರ್ಡ್ ಕ್ಲಾಸಸ್ ಭಾಗ–1 |
| | | | ಮೇಲಿನಂತೆ | ಫಾರೆಸ್ಟ್ ಪತ್ರಿಕೆ–1 |
| | | | ಮೇಲಿನಂತೆ | ಕೋ–ಆಪರೇಟಿವ್ ಆಡಿಟ್ ಎಕ್ಸಾಮಿನೇಶನ್ ಪತ್ರಿಕೆ–2 |
| | | | ಮೇಲಿನಂತೆ | ಫುಡ್ ಅಂಡ್ ಸಿವಿಲ್ ಸಪ್ಲೈಸ್ ಪತ್ರಿಕೆ–1 |
| | | | ಮಧ್ಯಾಹ್ನ 2.00 ರಿಂದ ಸಂಜೆ 4.00 ಗಂಟೆ | ಹೋಂ ಗಾರ್ಡ್ಸ್ ಮ್ಯಾನ್ಯುಯಲ್ |
| | | | ಮೇಲಿನಂತೆ | ಸೋಶಿಯಲ್ ವೆಲ್‌ಫೇರ್ ಅಂಡ್ ಬ್ಯಾಕ್ ವರ್ಡ್‌ಕ್ಲಾಸಸ್ ಮ್ಯಾನ್ಯುಯಲ್ ಅಂಡ್ ಕ್ಲಾಸಿಫಿಕೇಶನ್ ರಿಜರ್‌ವೇಶನ್ ಫಾರ್ ಬ್ಯಾಕ್‌ವರ್ಡ್ ಕ್ಲಾಸಸ್ ಭಾಗ–2 |
| | | | ಮೇಲಿನಂತೆ | ಪಿ.ಡಬ್ಲ್ಯೂ.ಡಿ. ಲೋಯರ್ ಪತ್ರಿಕೆ–2 |
| | | | ಮೇಲಿನಂತೆ | ಫಾರೆಸ್ಟ್ ಪತ್ರಿಕೆ–2 |
| | | | ಮೇಲಿನಂತೆ | ಕೋ–ಆಪರೇಟಿವ್ ಆಡಿಟ್ ಎಕ್ಸಾಮಿನೇಶನ್ ಪತ್ರಿಕೆ–3 |
| | | | ಮೇಲಿನಂತೆ | ಫುಡ್ ಅಂಡ್ ಸಿವಿಲ್ ಸಪ್ಲೈಸ್ ಪತ್ರಿಕೆ–2 |
| 12 | ಶುಕ್ರವಾರ | 13–02–2009 | ಬೆಳಿಗ್ಗೆ 10.00 ರಿಂದ 12.00 ಗಂಟೆ | ಮುನಿಸಿಪಲ್ ಅಂಡ್ ಲೋಕಲ್ ಬೋರ್ಡ್ಸ್ ಪತ್ರಿಕೆ–1 |
| | | | ಮೇಲಿನಂತೆ | ಕರ್ನಾಟಕ ಕನ್ಸ್ಯೂಮರ್ ಪ್ರೊಟಕ್ಷನ್ಸ್ ಸ್ಟೇಟ್ ಕಮಿಷನ್ ಅಂಡ್ ಡಿಸ್ಟ್ರಿಕ್ ಫೋರಮ್ ಸರ್ವಿಸ್ ಎಕ್ಸಾಮಿನೇಶನ್– ಪತ್ರಿಕೆ– 1 |
| | | | ಮಧ್ಯಾಹ್ನ 2.00 ರಿಂದ ಸಂಜೆ 4.00 ಗಂಟೆ | ಮುನಿಸಿಪಲ್ ಅಂಡ್ ಲೋಕಲ್ ಬೋರ್ಡ್ಸ್ ಪತ್ರಿಕೆ–2 |
| | | | ಮೇಲಿನಂತೆ | ಕರ್ನಾಟಕ ಕನ್ಸ್ಯೂಮರ್ ಪ್ರೊಟಕ್ಷನ್ಸ್ ಸ್ಟೇಟ್ ಕಮಿಷನ್ ಅಂಡ್ ಡಿಸ್ಟ್ರಿಕ್ ಫೋರಮ್ ಸರ್ವಿಸ್ ಎಕ್ಸಾಮಿನೇಶನ್– ಪತ್ರಿಕೆ–2 |

**ವಿ. ಬಿ. ಪಾಟೀಲ್**
ಕಾರ್ಯದರ್ಶಿ ಹಾಗೂ ನಿಯಂತ್ರಕರು,
ಇಲಾಖಾ ಪರೀಕ್ಷೆಗಳು, ಕರ್ನಾಟಕ ಲೋಕಸೇವಾ ಆಯೋಗ ಬೆಂಗಳೂರು.

**ಕರ್ನಾಟಕ ಲೋಕಸೇವಾ ಆಯೋಗ,"ಉದ್ಯೋಗ ಸೌಧ", ಬೆಂಗಳೂರು–560001.**

**ಅಧಿಸೂಚನೆ ಸಂಖ್ಯೆ ಇ.ಪ.(1)1219/2008–2009/ಪಿಎಸ್‌ಸಿ ದಿನಾಂಕ: 30–10–2008ಕ್ಕೆ**

**ಅನುಬಂಧ–"ಬಿ"**

**2008ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಗಳು**

**ಬೆಂಗಳೂರು, ಕೇಂದ್ರದಲ್ಲಿ ಮಾತ್ರ ನಡೆಯಲಿರುವ ಪರೀಕ್ಷೆಗಳ ವೇಳಾಪಟ್ಟಿ.**

| ಕ್ರ. ಸಂ. | ವಾರ | ದಿನಾಂಕ | ವೇಳೆ | ವಿಷಯ |
|---|---|---|---|---|
| 1. | ಸೋಮವಾರ | 16–02–2009 | ಬೆಳಿಗ್ಗೆ 10.00 ರಿಂದ ಮಧ್ಯಾಹ್ನ 1.00 ಗಂಟೆ | ಎಸ್.ಎ.ಎಸ್.ಭಾಗ–1,ಪತ್ರಿಕೆ–1 ಮತ್ತು ಎಲೆಕ್ಟ್ರಿಸಿಟಿ ಆಡಿಟ್ ಅಂಡ್ ಅಕೌಂಟ್ಸ್‌ಲಾಸ್ (ಹೈಯರ್) ಭಾಗ–2 (ಎರಡಕ್ಕೂ ಒಂದೇ ಪ್ರಶ್ನೆ ಪತ್ರಿಕೆ) (ಪುಸ್ತಕಗಳಿಲ್ಲದೆ) |
| | | | ಮೇಲಿನಂತೆ | ಟ್ರೆಜರಿ ಅಕೌಂಟ್ ಭಾಗ–1 ಪತ್ರಿಕೆ–1 (ಪುಸ್ತಕಗಳಿಲ್ಲದೆ) |
| | | | ಮೇಲಿನಂತೆ | ಕನ್ನಡ ಪತ್ರಿಕೆ–1(ಐಎಎಸ್,ಐಪಿಎಸ್ ಮತ್ತು ಐಎಫ್‌ಎಸ್ ಅಧಿಕಾರಿಗಳಿಗೆ ಮಾತ್ರ) (ಪುಸ್ತಕಗಳಿಲ್ಲದೆ) |

| ಕ್ರ. ಸಂ. | ವಾರ | ದಿನಾಂಕ | ವೇಳೆ | ವಿಷಯ |
|---|---|---|---|---|
| | | | ಬೆಳಿಗ್ಗೆ 10.00 ರಿಂದ ಮಧ್ಯಾಹ್ನ 12.00 ಗಂಟೆ<br>ಮೇಲಿನಂತೆ<br><br>ಮಧ್ಯಾಹ್ನ 2.00 ರಿಂದ ಸಂಜೆ 4.00 ಗಂಟೆ<br><br>ಮೇಲಿನಂತೆ<br><br>ಮಧ್ಯಾಹ್ನ 2.00 ರಿಂದ ಸಂಜೆ 5.00 ಗಂಟೆ<br>ಮೇಲಿನಂತೆ<br><br>ಮೇಲಿನಂತೆ | ಸ್ಪೆಷಲ್ ಲಾಸ್ ಅಂಡ್ ಸರ್ವೀಸ್ ರೂಲ್ಸ್<br>ಕರ್ನಾಟಕ ಅಡ್ಮಿನಿಸ್ಟ್ರೇಟಿವ್ ಟ್ರಿಬ್ಯುನಲ್ ಎಕ್ಸಾಮಿನೇಶನ್<br>ಎಸ್.ಎ.ಎಸ್.ಭಾಗ–1 ಪತ್ರಿಕೆ–2 (ಪುಸ್ತಕಗಳಿಲ್ಲದೆ)<br>ಟ್ರೆಜರಿ ಅಕೌಂಟ್ಸ್ ಭಾಗ–1 ಪತ್ರಿಕೆ–2 (ಪುಸ್ತಕಗಳಿಲ್ಲದೆ)<br>ಸೆಕ್ರೇಟೇರಿಯಟ್ ಮ್ಯಾನುಯಲ್ ಭಾಗ–2<br>ಟ್ರಾನ್ಸ್‌ಲೇಶನ್ ಟೆಸ್ಟ್ (ಪುಸ್ತಕಗಳಿಲ್ಲದೆ)<br>ಕನ್ನಡ ಪತ್ರಿಕೆ–2(ಐಎಎಸ್, ಐಪಿಎಸ್ ಮತ್ತು ಐಎಫ್‌ಎಸ್ ಅಧಿಕಾರಿಗಳಿಗೆ ಮಾತ್ರ) (ಪುಸ್ತಕಗಳಿಲ್ಲದೆ) |
| 2. | ಮಂಗಳವಾರ | 17–02–2009 | ಬೆಳಿಗ್ಗೆ 10.00 ರಿಂದ 12.00 ಗಂಟೆ<br>ಮೇಲಿನಂತೆ<br>ಮಧ್ಯಾಹ್ನ 2–00 ರಿಂದ ಸಂಜೆ 4–00ಗಂಟೆ<br><br>ಮೇಲಿನಂತೆ | ಎಸ್.ಎ.ಎಸ್. ಭಾಗ–1 ಪತ್ರಿಕೆ–3<br>ಟ್ರೆಜರಿ ಅಕೌಂಟ್ಸ್ ಭಾಗ–1 ಪತ್ರಿಕೆ–3<br>ಎಸ್.ಎ.ಎಸ್. ಭಾಗ–2 ಪತ್ರಿಕೆ–1 (ಪುಸ್ತಕಗಳಿಲ್ಲದೆ)<br>ಟ್ರೆಜರಿ ಅಕೌಂಟ್ಸ್ ಭಾಗ–2 ಪತ್ರಿಕೆ–1 (ಎಲಿಮೆಂಟರಿ ಬುಕ್ ಕೀಪಿಂಗ್) |
| 3 | ಬುಧವಾರ | 18–02–2009 | ಬೆಳಿಗ್ಗೆ 10.00 ರಿಂದ 12.00 ಗಂಟೆ<br>ಮೇಲಿನಂತೆ<br>ಮೇಲಿನಂತೆ<br><br>ಮಧ್ಯಾಹ್ನ 2–00 ರಿಂದ ಸಂಜೆ 4–00ಗಂಟೆ<br>ಮೇಲಿನಂತೆ<br>ಮೇಲಿನಂತೆ | ಎಸ್.ಎ.ಎಸ್. ಭಾಗ–2 ಪತ್ರಿಕೆ–2<br>ಎಲೆಕ್ಟ್ರಿಸಿಟಿ ಲಾಸ್ ಪರೀಕ್ಷೆ ಪತ್ರಿಕೆ–1<br>ಟ್ರೆಜರಿ ಅಕೌಂಟ್ಸ್ ಭಾಗ–2 ಪತ್ರಿಕೆ–2 (ಪುಸ್ತಕಗಳಿಲ್ಲದೆ)<br>ಎಲೆಕ್ಟ್ರಿಸಿಟಿ ಲಾಸ್ ಪರೀಕ್ಷೆ ಪತ್ರಿಕೆ–2<br>ಎಸ್.ಎ.ಎಸ್ ಭಾಗ–2 ಪತ್ರಿಕೆ–3<br>ಟ್ರೆಜರಿ ಅಕೌಂಟ್ಸ್ ಭಾಗ–2 ಪತ್ರಿಕೆ–3 |
| 4. | ಗುರುವಾರ | 19–02–2009 | ಬೆಳಿಗ್ಗೆ 10.00 ರಿಂದ 12.00 ಗಂಟೆ<br>ಮಧ್ಯಾಹ್ನ 2–00 ರಿಂದ ಸಂಜೆ 4–00ಗಂಟೆ | ಎಸ್.ಎ.ಎಸ್. ಭಾಗ–3 ಪತ್ರಿಕೆ–1<br>ಎಸ್.ಎ.ಎಸ್. ಭಾಗ–3 ಪತ್ರಿಕೆ–2 (ಪುಸ್ತಕಗಳಿಲ್ಲದೆ) |
| 5. | ಶುಕ್ರವಾರ | 20–02–2009 | ಬೆಳಿಗ್ಗೆ 10.00 ರಿಂದ 12.00 ಗಂಟೆ<br>ಮಧ್ಯಾಹ್ನ 2–00 ರಿಂದ ಸಂಜೆ 4–00ಗಂಟೆ<br><br>ಮೇಲಿನಂತೆ | ಎಸ್.ಎ.ಎಸ್. ಭಾಗ–3 ಪತ್ರಿಕೆ–3<br>ಎಸ್.ಎ.ಎಸ್. ಭಾಗ–3 ಪತ್ರಿಕೆ–4 (ಪುಸ್ತಕಗಳಿಲ್ಲದೆ)<br>ಎಲೆಕ್ಟ್ರಿಸಿಟಿ(ಆಡಿಟ್ ಅಂಡ್ ಅಕೌಂಟ್ಸ್) ಲಾಸ್ ಲೋಯರ್ ಪರೀಕ್ಷೆ |
| 6. | ಶನಿವಾರ | 21–02–2009 | ಬೆಳಿಗ್ಗೆ 10.00 ರಿಂದ 12.00 ಗಂಟೆ<br><br>ಮೇಲಿನಂತೆ<br>ಮೇಲಿನಂತೆ<br><br>ಮೇಲಿನಂತೆ<br>ಮೇಲಿನಂತೆ<br><br>ಮಧ್ಯಾಹ್ನ 2–00 ರಿಂದ ಸಂಜೆ 4–00ಗಂಟೆ<br><br>ಮೇಲಿನಂತೆ | ಎಲೆಕ್ಟ್ರಿಸಿಟಿ (ಆಡಿಟ್ ಅಂಡ್ ಅಕೌಂಟ್ಸ್) ಲಾಸ್ ಹೈಯರ್ ಪರೀಕ್ಷೆ ಭಾಗ–1<br>ಎಸ್.ಎ.ಎಸ್ ಭಾಗ–3 ಪತ್ರಿಕೆ–5<br>ಸೆಕ್ರೇಟೇರಿಯೆಟ್ ಮ್ಯಾನುಯಲ್ ಭಾಗ–1 ಪತ್ರಿಕೆ–1<br>ಇಂಡಿಯನ್ ಕಾಂಟ್ರಾಕ್ಟ್ ಆಕ್ಟ್<br>ಕರ್ನಾಟಕ ಲೋಕಸೇವಾ ಆಯೋಗ ಮ್ಯಾನುಯಲ್<br>ಸೆಕ್ರೇಟೇರಿಯೆಟ್ ಮ್ಯಾನುಯಲ್ ಭಾಗ–1 ಪತ್ರಿಕೆ–2<br>ಕರ್ನಾಟಕ ಲೋಕಸೇವಾ ಆಯೋಗ ರಿಕ್ರೂಟ್‌ಮೆಂಟ್ ರೂಲ್ಸ್ |

**ವಿ.ಬಿ. ಪಾಟೀಲ್**
ಕಾರ್ಯದರ್ಶಿ ಹಾಗೂ ನಿಯಂತ್ರಕರು,
ಇಲಾಖಾ ಪರೀಕ್ಷೆಗಳು
ಕರ್ನಾಟಕ ಲೋಕಸೇವಾ ಆಯೋಗ.

ಪಿ.ಆರ್. 551

**ಕರ್ನಾಟಕ ಲೋಕ ಸೇವಾ ಆಯೋಗ**

**ಲೋಕ ಸೇವಾ ಆಯೋಗದ ಕಛೇರಿ ಉದ್ಯೋಗ ಸೌಧ, ಬೆಂಗಳೂರು**

**ತಿದ್ದುಪಡಿ**

**ಸಂಖ್ಯೆ:ಆರ್(3)248/2008–09/ಪಿಎಸ್‌ಸಿ, ಬೆಂಗಳೂರು, ದಿನಾಂಕ: 17ನೇ ಅಕ್ಟೋಬರ್ 2008**

**ಉಲ್ಲೇಖ:** ಅಧಿಸೂಚನೆ ಸಂಖ್ಯೆ: ಆರ್(3)195/2008–09–ಪಿಎಸ್‌ಸಿ ದಿನಾಂಕ: 26.08.2008.

ಬೆರಳಚ್ಚುಗಾರರ ಹುದ್ದೆಗೆ ಅಂತಿಮ ಆಯ್ಕೆ ಪಟ್ಟಿಯನ್ನು ಅಧಿಸೂಚನೆ ಸಂಖ್ಯೆ: ಆರ್(3)195/2008–09–ಪಿಎಸ್‌ಸಿ ದಿನಾಂಕ: 26.08.2008ರಂದು ಪ್ರಕಟಿಸಿದ್ದು, ಶ್ರೀ ನಾಗಮಣಿ, (ನೋಂದಣಿ ಸಂಖ್ಯೆ 4878) ರವರನ್ನು ಶಿಕ್ಷಣ ಇಲಾಖೆಗೆ (ಕ್ರಮಸಂಖ್ಯೆ 38) ಹಂಚಿಕೆ ಮಾಡಲಾಗಿರುತ್ತದೆ. ಇವರ ವಿಳಾಸದಲ್ಲಿ ತಂದೆಯ ಹೆಸರು JALIDHAR ಎಂದು ಇದ್ದು, JALINDHAR ಎಂದು ಸರಿಪಡಿಸಿ ಓದಿಕೊಳ್ಳತಕ್ಕದ್ದು.

ಕಾರ್ಯದರ್ಶಿ

ಪಿ.ಆರ್. 532 ಕರ್ನಾಟಕ ಲೋಕ ಸೇವಾ ಆಯೋಗ.

**OFFICE OF THE SUPERINTENDENT OF POLICE, KOLAR DISTRICT, KOLAR**

**NOTIFICATION NO.M.V.C.125/2007-08, DATED:16TH JULY 2007**

**Sub:** Disposal of Condemned Jeeps & Motor Cycles-reg.

**Ref:** 1. Govt Order No.DPAR/142/EMV/2000, Dated:05.01.2000 and HD/23/EMV/07, Dd:11.06.2007.

2. DG & IGP, KS, Bangalore Order No. MT(1)26/06-07, (Vol.2), Dd:1.3.07 & 05.07.2007.

It is brought to the Notice of the public that the following quantity of condemned Jeeps and Motor Cycles are Scheduled to be auctioned on tender-cum-auction basis on 10.11.2008 at 11 AM in the premises of DAR, Kolar. Hence, the sealed tenders are requisitioned from the interested buyers along with the E.M.D., of Rs. 5,000/- (Rupees Five thousand only) for four wheelers and Rs. 1,000/- (Rupees One thousand only) for two wheelers through DD/Cash. The same will be received at DPO, Kolar up to 07.11.2008 at 5:00 PM. The details of condemned Jeeps and Motor Cycles are as follows.

**JEEPS AND MOTOR CYCLES**

01. CAG-6234 - MAHENDRA JEEP - 1988 MODEL
02. CAG-6233 - MAHENDRA JEEP - 1988 MODEL
03. CAG-6112 - MOTOR CYCLE - 1981 MODEL
04. CAG-6114 - MOTOR CYCLE - 1981 MODEL

Terms and conditions of sale etc., can be obtained at this office on any working days during office hours. The interested persons may also inspect the said items at DAR, Kolar on any working days between 10:00 am to 5 pm.

Superintendent of Police,

P.R. 533 Kolar District, Kolar.

**ಔಷಧ ನಿಯಂತ್ರಣ ಇಲಾಖೆ**

**ಪ್ರಾಂಶುಪಾಲರ ಕಛೇರಿ, ಸರ್ಕಾರಿ ಔಷಧ ವಿಜ್ಞಾನ ಮಹಾವಿದ್ಯಾಲಯ, ನಂ.2, ಪಿ.ಕಾಳಿಂಗರಾವ್ ರಸ್ತೆ, ಬೆಂಗಳೂರು–27**

**ಟೆಂಡರ್ ಪ್ರಕಟಣೆ**

**ಸಂಖ್ಯೆ:ಔನಿಇ/ಸಔವಿಮವಿ/ಟಿಐಎ/01/2008–09, ದಿನಾಂಕ: 7ನೇ ಅಕ್ಟೋಬರ್ 2008**

ಸದಸ್ಯ ಕಾರ್ಯದರ್ಶಿಗಳು, ಟೆಂಡರ್ ಆಹ್ವಾನಿಸುವ ಪ್ರಾಧಿಕಾರ, ಸರ್ಕಾರಿ ಔಷಧ ವಿಜ್ಞಾನ ಮಹಾವಿದ್ಯಾಲಯ, ಬೆಂಗಳೂರು–27 ಇವರು ಸದರಿ ವಿದ್ಯಾಸಂಸ್ಥೆಗೆ ಪ್ರಯೋಗಶಾಲಾ ಉಪಕರಣಗಳ ಖರೀದಿಗಾಗಿ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ.

ಉಪಕರಣಗಳ ವಿವರ ಮತ್ತು ಇಎಂಡಿ ಮೊತ್ತ ಈ ಕೆಳಗಿನಂತಿರುತ್ತದೆ.

| ಕ್ರಮ ಸಂಖ್ಯೆ | ಉಪಕರಣಗಳ ಹೆಸರು | ಇ.ಎಂ.ಡಿ. ಮೊತ್ತ ರೂ.ಗಳಲ್ಲಿ |
|---|---|---|
| 01 | ಯು.ವಿ.ಸ್ಪೆಕ್ಟ್ರೋಫೋಟೋಮೀಟರ್ | 9000–00 |

| ಕ್ರಮ ಸಂಖ್ಯೆ | ಉಪಕರಣಗಳ ಹೆಸರು | ಇ.ಎಂ.ಡಿ. ಮೊತ್ತ ರೂ.ಗಳಲ್ಲಿ |
|---|---|---|
| 02 | ಆರ್ಬಿಟಲ್ ಷೇಕಿಂಗ್ ಇನ್ಕುಬೇಟರ್ಸ್ | 2000–00 |
| 03 | ರೋಟರಿ ಇವಾಪರೇಟರ್ಸ್ | 5000–00 |
| 04 | ಡಿಜಿಟಲ್ ಪ್ಲೆತಿಸ್ಮೋಮೀಟರ್ | 2500–00 |
| 05 | ವಾಟರ್ ಪ್ಯೂರಿಫಿಕೇಷನ್ ಸಿಸ್ಟಮ್ (ಹೆಚ್.ಪಿ.ಎಲ್.ಸಿ. ಗ್ರೇಡ್) | 5000–00 |

ಟೆಂಡರ್ ಫಾರಂಗಳು ಸದರಿ ವಿದ್ಯಾಲಯದ ಕಛೇರಿಯಲ್ಲಿ ದಿನಾಂಕ:20.10.2008 ರ ಬೆಳಿಗ್ಗೆ 11:00 ಗಂಟೆಯಿಂದ 20.11.2008 ರ ಸಂಜೆ 4:00 ಗಂಟೆವರೆಗೆ ದೊರೆಯಲಿದೆ. ಅರ್ಜಿ ಶುಲ್ಕ ರೂ. 281/– (ಸೇವಾ ತೆರಿಗೆ ಸಹಿತ) ಕೊಟ್ಟು ಟೆಂಡರ್ ಫಾರಂಗಳನ್ನು ಮೇಲೆ ತಿಳಿಸಿದ ವಿದ್ಯಾಲಯದ ಕಚೇರಿಯಲ್ಲಿ ಪಡೆದುಕೊಳ್ಳುವುದು. ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ಸ್ವೀಕರಿಸಲು ಕೊನೆಯ ದಿನಾಂಕ 21.11.08 ರ ಶುಕ್ರವಾರ 4:00 ಗಂಟೆ ಆಗಿರುತ್ತದೆ. ಪ್ರತಿಯೊಂದು ಉಪಕರಣಕ್ಕೂ ಪ್ರತ್ಯೇಕವಾಗಿ ಭರ್ತಿ ಮಾಡಿದ ಟೆಂಡರ್ ಫಾರಂನ್ನು ಸೂಚಿಸಿದ ಇ.ಎಂಡಿ. ಮೊತ್ತದ ಜೊತೆಗೆ ಕಛೇರಿಗೆ ತಲುಪಿಸತಕ್ಕದ್ದು. ಸ್ವೀಕರಿಸಿದ ಟೆಂಡರ್ ಫಾರಂಗಳನ್ನು ದಿನಾಂಕ: 22.11.2008 ಶನಿವಾರ ಬೆಳಿಗ್ಗೆ 11:00 ಗಂಟೆಗೆ ಸರಿಯಾಗಿ ಪ್ರಾಂಶುಪಾಲರ ಕಚೇರಿ, ಸರ್ಕಾರಿ ಔಷಧ ವಿಜ್ಞಾನ ಮಹಾವಿದ್ಯಾಲಯ, ಬೆಂಗಳೂರು–27 ಇಲ್ಲಿ ತೆರೆಯಲಾಗುತ್ತದೆ. ಒಂದು ವೇಳೆ ಈ ದಿನ ಸಾರ್ವತ್ರಿಕ ರಜೆ ಇದ್ದಲ್ಲಿ ಮುಂದಿನ ಕೆಲಸದ ದಿನದಂದು ಟೆಂಡರ್ ಫಾರಂಗಳನ್ನು ತೆರೆಯಲಾಗುವುದು.

ಸದಸ್ಯ ಕಾರ್ಯದರ್ಶಿಗಳು,
ಟೆಂಡರ್ ಆಹ್ವಾನಿಸುವ ಪ್ರಾಧಿಕಾರ,
ಸರ್ಕಾರಿ ಔಷಧ ವಿಜ್ಞಾನ ಮಹಾವಿದ್ಯಾಲಯ, ಬೆಂಗಳೂರು–27

**DRUGS CONTROL DEPARTMENT**

**Office of the Principal Govt. College of Pharmacy, No.2, P. Kalinga Rao Road, Bangalore-560027**

**TENDER NOTIFICATION**

**No: DCD/GCP/TIA/01/2008-09, Dated: 7th October 2008**

Sealed Tenders are invited by Member Secretary, Committee for Tender inviting Authority and Tender accepting Authority of Government College of Pharmacy, No.2, P. Kalinga Rao Road, Bangalore-27 for supply of following laboratory instruments.

| Sl. No. | Name of the Instruments | EMD Rs. |
|---|---|---|
| 01 | UV Spectrophotometer | 9000-00 |
| 02 | Orbital shaking incubators | 2000-00 |
| 03 | Rotary evaporators | 5000-00 |
| 04 | Digital Plethysmometer | 2500-00 |
| 05 | Water purification system (H.P.L.C grade) | 5000-00 |

Tenders can be obtained from 20.10.08 to 20.11.08 on all working days between 11.00 AM to 4.00 PM by paying Rs. 281/- (including Service Tax) in cash. The completed Tender forms along with EMD should be submitted on or before 21.11.2008 at 4.00 PM. Separate Tender forms along with EMD should be submitted for each instrument.

The sealed Tender will be opened on 22.11.08 Saturday at 11.00 AM. Address for Issue, Receipt and Opening of Tenders will be at the office of the Principal, Government college of Pharmacy, No.2, P. Kalinga Rao Road, Bangalore560027.

Member Secretary,
Committee for Tender inviting Authority
Govt. College of Pharmacy, Bangalore-27.

P.R. 534

**ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ವಿಜಾಪೂರ ವಿಭಾಗ, ವಿಜಾಪೂರ**

**ಸಂಕ್ಷಿಪ್ತ ಟೆಂಡರ್ ಪ್ರಕಟಣೆ**

**ಸಂ/ಎ2/ಸೇಲ್ಸ/ಸಿಆರ್/ಹುಣಸೆ/08–09, ದಿನಾಂಕ: 15ನೇ ಅಕ್ಟೋಬರ್ 2008**

**ವಿಷಯ:** 2008–09ನೇ ಸಾಲಿನಲ್ಲಿ ಹುಣಸೆ ಫಸಲಿನ ಬಗ್ಗೆ ಮರು ಟೆಂಡರ್ ಕಂ ಹರಾಜು ನಡೆಸುವ ಕುರಿತು.

**ಉಲ್ಲೇಖ:** 1. ಮಾನ್ಯ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಳಗಾಂವ ರವರ ಅಧಿಕೃತ ಜ್ಞಾಪನಾ ಪತ್ರ ಸಂಖ್ಯೆ. ಎ3/ಎಸ್.ಎ.ಎಸ್/ಎಂ.ಎ.ಎಂ.ಪಿ/ಸಿಆರ್/30/2008–09 ದಿನಾಂಕ: 22.07.2008.

ಈ ಮೂಲಕ ಯಾವತ್ತು ಸಾರ್ವಜನಿಕರಿಗೆ ತಿಳಿಸುವುದೇನೆಂದರೆ, 2008–09ನೇ ಸಾಲಿಗಾಗಿ ವಿಜಾಪೂರ ಪ್ರಾದೇಶಿಕ ಅರಣ್ಯ ವಿಭಾಗದಲ್ಲಿ ಹುಣಸೆ ಫಸಲಿನ ಮರು ಟೆಂಡರ್ ಕಂ ಹರಾಜನ್ನು ದಿನಾಂಕ: 17.11.2008 ರಂದು ಮಧ್ಯಾಹ್ನ 4.00 ಗಂಟೆಗೆ ನಿಗದಿಪಡಿಸಿದ್ದು ಇರುತ್ತದೆ. ಟೆಂಡರ್‌ಗಳನ್ನು ದಿನಾಂಕ: 17.11.2008 ರಂದು ಮಧ್ಯಾಹ್ನ 3.00 ಗಂಟೆಯವರೆಗೆ ಸ್ವೀಕರಿಸಲಾಗುವುದು. ಒಂದು ವೇಳೆ ದಿ: 17.11.2008 ರಂದು ಯಾವುದೇ ಟೆಂಡರ್ ಬಾರದಿದ್ದಲ್ಲಿ ದಿ: 22.11.2008 ರಂದು ಮರು ಟೆಂಡರ್ ಹಾಜರ ಪ್ರಕ್ರಿಯೆ ನಡೆಸಲಾಗುವುದು. ಸದರ ಟೆಂಡರ್ ಹರಾಜಿನಲ್ಲಿ ಭಾಗವಹಿಸುವವರು 2008–09ನೇ ಸಾಲಿನಲ್ಲಿ ಈ ವಿಭಾಗದಲ್ಲಿ ಮಕ್ತೆದಾರರೆಂದು ಹೆಸರು ನೋಂದಾಯಿಸಬೇಕು/ನವೀಕರಿಸಬೇಕು. ಸದರಿ ಟೆಂಡರ ಕಂ ಹರಾಜನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ವಿಜಾಪೂರ ಇವರಾಗಲಿ ಅಥವಾ ಇವರಿಂದ ಅಧಿಕಾರ ಪಡೆದ ಅಧಿಕಾರಿಗಳು ನಡೆಸುವರು.

| | | |
|---|---|---|
| ಟೆಂಡರನ್ನು ಸ್ವೀಕರಿಸುವ ದಿನಾಂಕ ಮತ್ತು ವೇಳೆ | : | ದಿ: 17.11.2008 ಮಧ್ಯಾಹ್ನ 3.00 ಗಂಟೆಯವರೆಗೆ |
| ಹರಾಜು ಮಾಡುವ ದಿನಾಂಕ ವೇಳೆ ಮತ್ತು ಸ್ಥಳ | : | ದಿ: 17.11.2008 4.00 ಗಂಟೆಗೆ<br>ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ಕಛೇರಿ,<br>ವಿಜಾಪೂರ ವಿಭಾಗ, ವಿಜಾಪೂರ. |
| ಟೆಂಡರ್ ಫಾರ್ಮ ಕೊಡುವ ದಿನಾಂಕ ಮತ್ತು ವೇಳೆ | : | ದಿ: 16.11.2008 ಮಧ್ಯಾಹ್ನ 1.30 ಗಂಟೆಯವರೆಗೆ |
| ಟೆಂಡರ್ ಫಾರ್ಮ ಬೆಲೆ | : | ರೂ. 200/– ಹಾಗೂ ಪ್ರಚಲಿತ ಕರಗಳು. |

**ಪರಿಶಿಷ್ಟ ಅ**

| ಅ ನಂ. | ಯುನಿಟ್ ನಂಬರ್ | ವಲಯ | ಕ್ಷೇತ್ರದ ಹೆಸರು ರಸ್ತೆ ಮರ | ಗಿಡಗಳ ಸಂಖ್ಯೆ |
|---|---|---|---|---|
| 1 | 01 | ವಿಜಾಪೂರ | ತಿಕೋಟಾ–ಕನಮಡಿ ರಸ್ತೆ ಎಡ ಬಲ | 6 |
| 2 | | | ತಿಕೋಟಾ–ಹೊನವಾಡ ರಸ್ತೆ | 16 |
| 3 | | | ಹಲಗನಿ–ಗಲಗಲಿ–ರಸ್ತೆ | 11 |
| 4 | | | ವಿಜಾಪೂರ–ಕೊಲಾರ ರಸ್ತೆ ಎಡ ಬಲ | 155 |
| | | | **ಒಟ್ಟು** | **188** |
| 1 | 02 | ಬ.ಬಾಗೇವಾಡಿ | ಬಾಗೇವಾಡಿ–ಸವಳಹಳ್ಳಿ ಎಡ ಬಲ | 395 |
| 2 | | | ಹೊ. ಹಿಪರಗಿ–ಬಾಗೇವಾಡಿ ರಸ್ತೆ ಎಡ ಬಲ | 26 |
| 3 | | | ಮುಳವಾಡ ಕ್ರಾಸ – ಮಂಗಮನ ಗುಡಿ ಎಡ ಬಲ | 169 |
| 4 | | | ಮುಳವಾಡ–ಮುಳವಾಡ ಗ್ರಾಮ ರಸ್ತೆ ಎಡ ಬಲ | 39 |
| 5 | | | ಬಾಗೇವಾಡಿ–ತೆಲಗಿ ರೊಡ ಎಡ ಬಲ | 14 |
| 6 | | | ಮನಗೊಳಿ–ಸವಳಹಳ್ಳಿ ರಸ್ತೆ ಎಡ ಬಲ | 509 |
| | | | **ಒಟ್ಟು** | **1152** |

**ಷರತ್ತುಗಳು**

1. ಟೆಂಡರ್ ಕಂ ಹರಾಜಿನಲ್ಲಿ ಭಾಗವಹಿಸುವವರು 2008–09ನೇ ಸಾಲಿಗಾಗಿ ನೋಂದಾಯಿತರಾಗಿರಬೇಕು.
2. ಗುತ್ತಿಗೆದಾರರು 2008–09ನೇ ಸಾಲಿಗಾಗಿ ತಮ್ಮ ಹೆಸರನ್ನು ದಿನಾಂಕ 16.11.2008 ರ ಒಳಗಾಗಿ ಈ ಕಾರ್ಯಾಲಯದಲ್ಲಿ ನೊಂದಾಯಿಸಿಕೊಳ್ಳತಕ್ಕದ್ದು.

